CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಫೆಬ್ರವರಿ ೨೬, ೨೦೦೪ (ಫಾಲ್ಗುಣ ೭, ಶಕ ವರ್ಷ ೧೯೨೫) | ಸಂಚಿಕೆ ೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಲೋಕೋಪಯೋಗಿ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಲೋಇ 108 ಸೇಎಸು 2003, ಬೆಂಗಳೂರು, ದಿನಾಂಕ: 16ನೇ ಜನವರಿ 2004**

ಸರ್ಕಾರದ ಆದೇಶ ಸಂಖ್ಯೆ: ಲೋಇ 108 ಸೇಎಸು 2003, ದಿನಾಂಕ: 28.6.2003ರ ಪುಟ-3 ರಲ್ಲಿನ ಆದೇಶದ ಭಾಗದ 3ನೇ ಸಾಲಿನಲ್ಲಿ ಬರುವ "ಇವರಿಗೆ ಅಧೀಕ್ಷಕ ಇಂಜಿನಿಯರ್ ಪದವೃಂದದಲ್ಲಿ ದಿನಾಂಕ: 24.10.2000 ನ್ನು ಅರ್ಹತಾ ದಿನಾಂಕವನ್ನಾಗಿ ನಿಗದಿಪಡಿಸಲಾಗಿದೆ" ಎನ್ನುವುದರ ಬದಲು "ಇವರಿಗೆ ಕರ್ನಾಟಕ ನಾಗರೀಕ ಸೇವೆ (ಆರ್.ಪಿ.ಪಿ.ಪಿ.) ನಿಯಮಾವಳಿಗಳ ನಿಯಮ 2(1)(ಸಿ) ರನ್ವಯ ದಿನಾಂಕ: 24.10.2000 ರಿಂದ ಅಧೀಕ್ಷಕ ಇಂಜಿನಿಯರ್ ಹುದ್ದೆಗೆ ಪೂರ್ವಾನ್ವಯವಾಗಿ ಪದೋನ್ನತಿ ನೀಡಲಾಗಿದೆ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಸಿ. ಬಸವರಾಜು
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸೇವೆಗಳು-ಎ).

ಪಿ.ಆರ್. 81

### ಸೇರ್ಪಡೆ

**ಸಂಖ್ಯೆ: ಲೋಇ 322 ಸೇಎಸು 2003, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2003**

ಸರ್ಕಾರದ ಅಧಿಸೂಚನೆ ಸಂಖ್ಯೆ: ಪಿಡಬ್ಲ್ಯೂಡಿ 84 ಎಸ್‌ಪಿಜಿ 2002, ದಿನಾಂಕ: 11.4.2002 ರಲ್ಲಿ ಪ್ರಕಟಿಸಲಾಗಿರುವ ಕಾರ್ಯಪಾಲಕ ಇಂಜಿನಿಯರ್ ಪದವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 2141 ರಲ್ಲಿ ಪ್ರತಿಬಿಂಬಿತರಾಗಿರುವ ಶ್ರೀ ದೊಡ್ಡಚೌಡಪ್ಪ ರವರಿಗೆ ಸಂಬಂಧಿಸಿದ ಕಲಂ ಅನ್ನು ಕೈಬಿಡಲಾಗಿದೆ ಹಾಗೂ ಕ್ರಮಸಂಖ್ಯೆ 2141ಕ್ಕೆ ಬದಲಾಗಿ ಈ ಕೆಳಕಂಡಂತೆ ಕ್ರಮಸಂಖ್ಯೆ:2010ಎ ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

| Sl. No. | List No. | AE Grd No. | Name of the Engineer | SC/ST | Date of Birth | Date of Promotion | Eligibility Date | Remarks |
|---|---|---|---|---|---|---|---|---|
| 2010A | 2 | 3076 | Doddachowdappa | SC | 22/05/49 | 03/1/2000 | 26/2/1999 | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಸಿ. ಬಸವರಾಜು
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸೇವೆಗಳು-ಎ).

ಪಿ.ಆರ್. 82

**ಇಂಧನ ಸಚಿವಾಲಯ**

**ವಿಷಯ:** ಶ್ರೀ ಎಸ್. ಮಹೇಶ್ ಬಾಬು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿ), ಇವರ ಸೇವೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು ನಗರಾಭಿವೃದ್ಧಿ ಪ್ರಾಧಿಕಾರ ಮೈಸೂರು, ಇವರ ಪತ್ರ ಸಂಖ್ಯೆ: ಸಿಬ್ಬಂದಿ (2) ಸಿಆರ್ 78, 02-03, ದಿನಾಂಕ: 8.12.2003.

2) ಪ್ರಧಾನ ವ್ಯವಸ್ಥಾಪಕರು, (ಪ್ರಭಾರ) (ಆ ಮತ್ತು ಮಾ.ಸ.ಅ.) ಮೆಸ್ಕಾಂ, ಮಂಗಳೂರು ಇವರ ಪತ್ರ ಸಂಖ್ಯೆ: ಪ್ರವ್ಯ (ಅ) ಮೆಸ್ಕಾಂ ಯಂ-3103, ದಿನಾಂಕ: 29.12.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ ಮೈಸೂರುರವರು ಶ್ರೀ ಎಸ್. ಮಹೇಶ್ ಬಾಬು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ದಿನಾಂಕ: 17.6.2002 ರಿಂದ ಪ್ರತಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದು, ಒಂದು ವರ್ಷ ಪೂರ್ಣಗೊಂಡಿರುವುದರಿಂದ ಸದರಿರವರ ಸೇವೆಯನ್ನು ಎರಡು ವರ್ಷಗಳವರೆಗೆ, ಪ್ರಾಧಿಕಾರದ ಮತ್ತು ಸಾರ್ವಜನಿಕ ಹಿತ ದೃಷ್ಟಿಯಿಂದ ಮುಂದುವರಿಸಲು ಕೋರಿರುತ್ತಾರೆ. ಮೇಲೆ ಓದಲಾದ (2)ರ ಪತ್ರದಲ್ಲಿ ಪ್ರಧಾನ ವ್ಯವಸ್ಥಾಪಕರು (ಪ್ರಭಾರ) (ಆ. ಮತ್ತು ಮಾ.ಸ.ಅ.) ಮೆಸ್ಕಾಂ ಮಂಗಳೂರು ಇವರು ಶ್ರೀ ಎಸ್. ಮಹೇಶ್ ಬಾಬು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿ), ಇವರು ಮೆಸ್ಕಾಂ ವ್ಯಾಪ್ತಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿಲ್ಲವಾದ್ದರಿಂದ ಸೂಕ್ತ ನಿರ್ಧಾರವನ್ನು ಸರ್ಕಾರದ ಮಟ್ಟದಲ್ಲೇ ತೆಗೆದುಕೊಳ್ಳಬಹುದಾಗಿದೆ ಎಂದು ತಿಳಿಸಿರುತ್ತಾರೆ.

2. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 187 ಇಇಬಿ 2003, ಬೆಂಗಳೂರು, ದಿನಾಂಕ: 23ನೇ ಜನವರಿ 2004**

3. ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್. ಮಹೇಶ್ ಬಾಬು, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಇವರ ನಿಯೋಜನಾ ಅವಧಿಯನ್ನು ಒಂದು ವರ್ಷದ ಅವಧಿಗೆ ದಿನಾಂಕ: 17.6.2003 ರಿಂದ 16.6.2004 ರವರೆಗೆ ಸಾರ್ವಜನಿಕ ಹಿತದೃಷ್ಟಿಯಿಂದ, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿಯೇ ಮುಂದುವರಿಸಲು ಅನುಮತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 83 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಕಾವೇರಿ ನೀರಾವರಿ ನಿಗಮ ನಿಯಮಿತದಲ್ಲಿ ಲೆಕ್ಕ ಅಧೀಕ್ಷಕರ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಕಾವೇರಿ ನೀರಾವರಿ ನಿಗಮ, ವ್ಯವಸ್ಥಾಪಕ ನಿರ್ದೇಶಕರವರ ಪತ್ರ ಸಂಖ್ಯೆ: ಸಿಎನ್ಎನ್/Dep/WRD/State Accounts/2003/708, ದಿನಾಂಕ: 15/12/2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ, ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು ರವರು, ಕಾವೇರಿ ನೀರಾವರಿ ನಿಗಮದಲ್ಲಿ ಲೆಕ್ಕ ಅಧೀಕ್ಷಕ (Accounts Superintendent), ಹುದ್ದೆಯನ್ನು ಸೃಜಿಸಿ, ರಾಜ್ಯ ಲೆಕ್ಕಪತ್ರ ಇಲಾಖೆ (State Accounts Department) ಯಲ್ಲಿ ಲೆಕ್ಕ ಅಧೀಕ್ಷಕರಾಗಿರುವ ಶ್ರೀ ಎಸ್.ಕೆ. ವಿಶ್ವನಾಥ್‌ರವರನ್ನು ಲೆಕ್ಕ ಅಧೀಕ್ಷಕರನ್ನಾಗಿ ನೇಮಿಸಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿದ್ದರು.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಜಸಂಇ 01 ಕೆಎನ್ಎನ್ 2004, ಬೆಂಗಳೂರು, ದಿನಾಂಕ: 24ನೇ ಜನವರಿ 2004**

ಸರ್ಕಾರವು, ಕಾವೇರಿ ನೀರಾವರಿ ನಿಗಮ ನಿಯಮಿತದಲ್ಲಿ ಲೆಕ್ಕ ಅಧೀಕ್ಷಕರ ಒಂದು ಹುದ್ದೆಯನ್ನು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆಯ ಮೇಲೆ ಭರ್ತಿ ಮಾಡಿಕೊಳ್ಳುವ ಷರತ್ತಿಗೊಳಪಟ್ಟು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರಿಗೂ ಸೃಜಿಸಲಾಗಿದೆ ಎಂದು ಆದೇಶಿಸಲಾಗಿದೆ. ಕಾವೇರಿ ನೀರಾವರಿ ನಿಗಮ ನಿಯಮಿತದ ಸಿಬ್ಬಂದಿ ವೃಂದದಲ್ಲಿ ತತ್ಸಮಾನ ಹುದ್ದೆಯನ್ನು ರದ್ದುಗೊಳಿಸುವಂತೆಯೂ ಸಹ ಆದೇಶಿಸಲಾಗಿದೆ.

ಈ ಆದೇಶವನ್ನು ಲೋಕೋಪಯೋಗಿ ಇಲಾಖೆ, ಆರ್ಥಿಕ ಕೋಶ-1ರ ಟಿಪ್ಪಣಿ ಸಂಖ್ಯೆ: ಲೋಇ/28/ಆಕೋ-1/2004, ದಿನಾಂಕ: 20/1/2004 ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಡಿ. ಧಮನ್**

ಪಿ.ಆರ್. 84 ಸರ್ಕಾರದ ಅಧೀನ ಕಾರ್ಯದರ್ಶಿ, (ತಾಂ)

ಜಲ ಸಂಪನ್ಮೂಲ ಇಲಾಖೆ ಕೃಭಾಜನಿನಿ (ವಿ-ಕೋಶ).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಆಟೋರಿಕ್ಷಾ ಟರ್ಮ್ ಸಾಲ ಯೋಜನೆಯಲ್ಲಿ ಶೇ. 5ರಷ್ಟು ಫಲಾನುಭವಿಗಳನ್ನು ಆಯ್ಕೆ ಮಾಡುವ ವಿವೇಚನಾಧಿಕಾರವನ್ನು ನಿಗಮದ ನಿರ್ದೇಶಕ ಮಂಡಳಿಗೆ ನೀಡುವ ಬಗ್ಗೆ.

**ಓದಲಾಗಿದೆ:**
1) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಇವರ ಏಕ ಕಡತ ಸಂಖ್ಯೆ: ಕಹಿನಿ/ವ್ಯ/103/2002-03.
2) ದಿನಾಂಕ: 30.10.2003 ಮತ್ತು 5.11.2003 ರಂದು ಜರುಗಿದ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ನಿರ್ದೇಶಕ ಮಂಡಳಿಯ ಸಭೆಯ ನಿರ್ಣಯ.
3) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಇವರ ಏಕ ಕಡತ ಸಂಖ್ಯೆ: ಕಹಿನಿ/ವ್ಯ/120/2003-04, ದಿನಾಂಕ: 17.11.2003.

**ಪ್ರಸ್ತಾವನೆ:**

ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವು ಆಟೋರಿಕ್ಷಾ ಟರ್ಮ್‌ಸಾಲ ಯೋಜನೆಯಡಿ ಬೆಂಗಳೂರು ನಗರ ಜಿಲ್ಲೆಯಲ್ಲಿ ಫಲಾನುಭವಿಗಳನ್ನು ಲಾಟರಿ ಎತ್ತುವ ಮೂಲಕ ಆಯ್ಕೆ ಮಾಡುತ್ತಿದೆ.

ಅವಧಿ (ಟರ್ಮ್) ಸಾಲ ಯೋಜನೆಯಲ್ಲಿ ಆಟೋರಿಕ್ಷಾ ಖರೀದಿಸಲು ನಿರ್ದೇಶಕ ಮಂಡಳಿಗೆ ಶೇ.5 ರಷ್ಟನ್ನು ಆಯ್ಕೆ ಮಾಡುವ ವಿವೇಚನಾಧಿಕಾರವನ್ನು ನೀಡಬೇಕೆಂದು ಕ್ರಮ ಸಂಖ್ಯೆ: 2 ರಲ್ಲಿ ಓದಲಾದ ನಿರ್ಣಯದಲ್ಲಿ ನಿರ್ದೇಶಕ ಮಂಡಳಿ ನಿರ್ಣಯಿಸಿದೆ. ಕ್ರಮ ಸಂಖ್ಯೆ: 3 ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಇವರು ಈ ಯೋಜನೆಯಲ್ಲಿ ಆಟೋರಿಕ್ಷಾ ಕೊಡಿಸಿ ಕೊಡುವಂತೆ ಸನ್ಮಾನ್ಯ ಮುಖ್ಯಮಂತ್ರಿಗಳ ಕುಂದು ಕೊರತೆ ವಿಭಾಗದಿಂದ ಹಾಗೂ ಗಣ್ಯ ವ್ಯಕ್ತಿಗಳಿಂದ ಸ್ವೀಕರಿಸಿದ ಮನವಿಗಳನ್ನು ಮತ್ತು ಹೆಚ್ಚಿನ ಅರ್ಹತೆ ಮತ್ತು ಅವಶ್ಯಕತೆ ಇರುವ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಲು ಪ್ರಸ್ತುತ ಇರುವ ಲಾಟರಿ ಮೂಲಕ ಆಯ್ಕೆ ಮಾಡುವ ವಿಧಾನದಿಂದ ಇವುಗಳನ್ನು ಪರಿಗಣಿಸಲು ಸಾಧ್ಯವಾಗುವುದಿಲ್ಲ ಎಂಬ ಅಂಶವನ್ನು ಪರಿಶೀಲಿಸಿದ ನಿರ್ದೇಶಕ ಮಂಡಳಿಯು ಬೆಂಗಳೂರು ನಗರ ಜಿಲ್ಲೆಗೆ ಸಂಬಂಧಿಸಿದಂತೆ ನಿಗಮಕ್ಕೆ ಹಂಚಿಕೆಯಾಗುವ ಪರ್ಮಿಟ್ ಖೋಟಾದಲ್ಲಿ ಶೇ.5 ರಷ್ಟು ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವ ವಿವೇಚನಾಧಿಕಾರವನ್ನು ನಿಗಮದ ನಿರ್ದೇಶಕ ಮಂಡಳಿಗೆ ನೀಡಬೇಕೆಂದು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 450 ಬಿಎಂಎಸ್ 2003, ಬೆಂಗಳೂರು, ದಿನಾಂಕ: 20ನೇ ಜನವರಿ 2004**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಆಟೋರಿಕ್ಷಾ ಖರೀದಿಸಲು ಟರ್ಮ್ ಸಾಲ ಯೋಜನೆಯಲ್ಲಿ ಅರ್ಹತೆ ಹೊಂದಿರುವ ಮತ್ತು ಸಾಲ ಬಯಸಿದ ಕೆಲವು ಅತ್ಯಂತ ಅರ್ಹ ಫಲಾನುಭವಿಗಳು ಲಾಟರಿ ಎತ್ತುವ ಮೂಲಕ ಆಯ್ಕೆಯಾಗದೇ ಇರುವ ಸಂಭವವಿರುತ್ತದೆ. ಈ ಹಿನ್ನೆಲೆಯಲ್ಲಿ ಅರ್ಹತೆ ಹೊಂದಿದ್ದು ಅತ್ಯಂತ ಅವಶ್ಯಕತೆ ಹೊಂದಿರುವ ಫಲಾನುಭವಿಗಳಿಗೆ ಪ್ರಯೋಜನ ದೊರಕಿಸಲು ಅಸಾಧ್ಯವಾಗಿರುತ್ತದೆ. ಆದ್ದರಿಂದ ಬೆಂಗಳೂರು ನಗರ ಜಿಲ್ಲೆಯಲ್ಲಿ ನಿಗಮಕ್ಕೆ ಹಂಚಿಕೆ ಮಾಡುವ ಆಟೋರಿಕ್ಷಾ ಪರ್ಮಿಟ್ ಸಂಖ್ಯೆಯ ಶೇ.5 ರಷ್ಟು ಫಲಾನುಭವಿಗಳನ್ನು ಆಯ್ಕೆ ಮಾಡುವ ವಿವೇಚನಾ ಖೋಟಾವನ್ನು ನಿಗಮದ ನಿರ್ದೇಶಕ ಮಂಡಳಿಗೆ ಮೀಸಲಿಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಈ ವಿವೇಚನಾ ಖೋಟಾದಲ್ಲಿ ಫಲಾನುಭವಿಗಳನ್ನು ಆಡಳಿತ ಮಂಡಳಿಯು ಆಯ್ಕೆ ಮಾಡಿ ನಂತರ ಸರ್ಕಾರದ ಅನುಮೋದನೆ ಪಡೆದು ಮುಂದಿನ ಕ್ರಮವಹಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಂ. ಪ್ರಾಣದೇವ

ಪಿ.ಆರ್. 85 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಸುತ್ತೋಲೆ

**ಸಂಖ್ಯೆ: ಸಕಇ 182 ಎಸ್.ಎ.ಡಿ. 2003, ಬೆಂಗಳೂರು, ದಿನಾಂಕ: 19ನೇ ಜನವರಿ 2004**

ಭಾರತ ಸರ್ಕಾರವು ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಆದೇಶಗಳು (ತಿದ್ದುಪಡಿ) ಅಧಿನಿಯಮ 1976 ರಲ್ಲಿ ದಿನಾಂಕ: 27.7.76 ರಿಂದ ಜಾರಿಗೆ ಬರುವಂತೆ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿಯನ್ನು ಪ್ರಕಟಿಸಿದೆ. ಇದರಲ್ಲಿ 101 ಅನುಸೂಚಿತ ಜಾತಿಗಳು ಮತ್ತು 50 ಅನುಸೂಚಿತ ಬುಡಕಟ್ಟುಗಳು (ಉತ್ತರ ಕನ್ನಡ ಜಿಲ್ಲೆ ಸಿದ್ದಿ ಸೇರಿದೆ) ಇಂತಹ ಜಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ನೀಡುವ ಬಗ್ಗೆ ರಾಜ್ಯ ಸರ್ಕಾರವು ಆಗಿಂದಾಗ್ಗೆ ಸೂಚನೆಗಳನ್ನು ನೀಡುತ್ತಾ ಬಂದಿದೆ.

ಕರ್ನಾಟಕ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ ಹಾಗೂ ಅದಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ನಿಯಮಗಳಲ್ಲಿ ಜಾತಿ ಪ್ರಮಾಣ ಪತ್ರ ಮತ್ತು ಸಿಂಧುತ್ವ ಪ್ರಮಾಣ ಪತ್ರ ಕಾಲಮಿತಿ ನಿಗದಿಪಡಿಸಿ ಆಕಾಲಾ ಮಿತಿಯಲ್ಲಿಯೇ ಜಾರಿ ಮಾಡುವಂತೆ ಸೂಚನೆಗಳಿವೆ. ಹಾಗೂ ಅವುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಸಕ್ಷಮ ಪ್ರಾಧಿಕಾರದ ಕರ್ತವ್ಯವಾಗಿದೆ.

ಯಾರೇ ಅಭ್ಯರ್ಥಿ ಮತ್ತು ಅವನ ತಂದೆ ತಾಯಿ ಅಥವಾ ಪೋಷಕರು ವಿದ್ಯಾಭ್ಯಾಸ ಮೀಸಲಾತಿ ಪ್ರಯೋಜನ ಪಡೆಯಲು ಸರ್ಕಾರವು ನಿಗದಿಪಡಿಸಲಾದ ನಿಯಮದಲ್ಲಿ ತಹಶೀಲ್ದಾರರಿಗೆ ಅರ್ಜಿದಾರರು ಸಲ್ಲಿಸಲಾದ ಅರ್ಜಿಯನ್ನು ಪರಿಶೀಲಿಸಿ ಹಕ್ಕಿನ ಯಥಾರ್ಥ್ಯವನ್ನು ಪರಿಶೀಲಿಸಿ ಜಾತಿ ಪ್ರಮಾಣ ಪತ್ರವನ್ನು ನೀಡುವ ಕುರಿತು 2 ತಿಂಗಳೊಳಗೆ ಪ್ರಮಾಣ ಪತ್ರ ನೀಡುವ ಅಥವಾ ತಿರಸ್ಕರಿಸುವ ಕಾಲಮಿತಿಯಿದೆ. ಸದರಿ ಅವಧಿಯಲ್ಲಿ ಅರ್ಜಿದಾರರ ಕ್ಲೈಮ್ ಹಕ್ಕನ್ನು ತಿರಸ್ಕರಿಸಿದ್ದಲ್ಲಿ ಇಂತಹ ಆದೇಶ ವಿರುದ್ಧ ಒಂದು ಅಪೀಲನ್ನು ಸಹಾಯಕ ಆಯುಕ್ತರಿಗೆ ಸಲ್ಲಿಸಲು ಹಾಗೂ ಸಹಾಯಕ ಆಯುಕ್ತರು ಉಭಯ ಪಕ್ಷದವರಿಗೂ ಚುನಾವಣೆ ಅವಕಾಶವನ್ನು ಕಲ್ಪಿಸಿ

ಸ್ಥಳೀಯ ವಿಚಾರಣೆ ನಡೆಸಿದ ನಂತರ 1 ತಿಂಗಳ ಕಾಲಮಿತಿ ಅವಕಾಶ ಕಲ್ಪಿಸಲಾಗಿದೆ. ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳು ಇವರಿಗೆ ನೀಡಲಾದ ಜಾತಿ ಪ್ರಮಾಣ ಪತ್ರವು ಅದು ರದ್ದಾಗುವವರೆಗೆ ಸಿಂಧು ಆಗಿರುವುದು.

ಇದಲ್ಲದೆ ಉದ್ಯೋಗದ ಉದ್ದೇಶಕ್ಕಾಗಿ ಸಿಂಧುತ್ವ ಪ್ರಮಾಣ ಪತ್ರವನ್ನು ಅಭ್ಯರ್ಥಿ ಪಡೆಯಬೇಕಾಗಿರುವುದು. ಇಂತಹ ಸಿಂಧುತ್ವ ಪ್ರಮಾಣ ಪತ್ರ ಪಡೆಯಲು ಅರ್ಜಿದಾರನು ಜಾತಿಗೆ ಸಂಬಂಧಿಸಿದಂತೆ, ಸಂಬಂಧಿಸಿದ ದಾಖಲೆ ದಸ್ತಾವೇಜುಗಳ ಸಮೇತ ನಿಗದಿತ ನಮೂನೆಯಲ್ಲಿ ಜಾತಿ ಪರಿಶೀಲನಾ ಸಮಿತಿಗೆ ಅರ್ಜಿ ಸಲ್ಲಿಸತಕ್ಕದ್ದು. ಇಂತಹ ಅರ್ಜಿಯನ್ನು ಜಾತಿ ಪರಿಶೀಲನಾ ಸಮಿತಿಯು ಒಂದು ತಿಂಗಳ ಕಾಲಮಿತಿಯೊಳಗೆ ದಾಖಲೆ ದಸ್ತಾವೇಜು ವಿಚಾರಣೆ ಮುಂತಾದವುಗಳನ್ನು ಸಂಬಂಧಪಟ್ಟ ಅರ್ಜಿದಾರರಿಗೆ ಕಾಲಾವಕಾಶ ನೀಡಿ ಒಂದು ತಿಂಗಳ ಅವಧಿಯೊಳಗಾಗಿ ಅರ್ಜಿಯನ್ನು ಪುರಸ್ಕರಿಸುವ ಅಥವಾ ಕಾರಣಗಳೊಂದಿಗೆ ತಿರಸ್ಕರಿಸುವ ಕುರಿತು ನಿಯಮಗಳಲ್ಲಿ ಮಾರ್ಗಸೂಚಿಗಳನ್ನು ಸೂಚಿಸಿದೆ. ಇಂತಹ ಕಾಲಾಮಿತಿಯೊಳಗೆ ಜಿಲ್ಲಾ ಜಾತಿ ಪರಿಶೀಲನಾ ಸಮಿತಿ ಅಧ್ಯಕ್ಷರು ಹಾಗೂ ಜಿಲ್ಲಾಧಿಕಾರಿಗಳು ಸಿಂಧುತ್ವ ಪ್ರಮಾಣ ಪತ್ರ ನೀಡಿಕೆ ಕುರಿತು ಕ್ರಮ ಜರುಗಿಸಬೇಕಾಗಿದೆ. ಇಂತಹ ಜಿಲ್ಲಾ ಪರಿಶೀಲನಾ ಸಮಿತಿಯು ಒಂದು ವೇಳೆ, ಕಾರಣಗಳೊಂದಿಗೆ ತಿರಸ್ಕರಿಸಿದ್ದಲ್ಲಿ ಅಂತಹ ಅರ್ಜಿದಾರರು ಮೇಲ್ಮನವಿ ಸಲ್ಲಿಸಲು ಅವಕಾಶವಿದ್ದು ಮೇಲ್ಮನವಿ ಪ್ರಾಧಿಕಾರ ಉಭಯ ಪಕ್ಷದಾರರಿಗೆ ಅವರ ಕ್ಲೈಮ್‌ನ್ನು ಮಂಡಿಸಲು ಕಾಲಾವಕಾಶ ಕಲ್ಪಿಸಿ ಅಪೀಲು ಪ್ರಾಧಿಕಾರಿಯು ಸೂಕ್ತವೆನಿಸುವಂತಹ ಆದೇಶವನ್ನು 45 ದಿನದೊಳಗಾಗಿ ಹೊರಡಿಸಲು ಅವಕಾಶ ಕಲ್ಪಿಸಿದೆ.

ಹೀಗೆ ಇದ್ದರೂ ಸಹ ಸಕ್ಷಮ ಪ್ರಾಧಿಕಾರಿಗಳು ಪ್ರಮಾಣ ಪತ್ರ ನೀಡುವಲ್ಲಿ ವಿನಾಕಾರಣ ಕಿರುಕುಳ ನೀಡುತ್ತಿರುವ ಹಾಗೂ ಅಧಿನಿಯಮಗಳಲ್ಲಿ ನಿಗದಿಪಡಿಸಲಾದ ಕಾಲಾಮಿತಿಯೊಳಗೆ ಕ್ರಮ ಜರುಗಿಸದಿರುವ ಮಾಹಿತಿಯು ಸರ್ಕಾರದ ಗಮನಕ್ಕೆ ಬಂದಿದ್ದು, ವಿನಾಕಾರಣ ವಿಳಂಬ ನೀತಿ ಅನುಸರಿಸಿ ಅರ್ಜಿದಾರರಿಗೆ ಕಿರುಕುಳ/ತೊಂದರೆಗಳನ್ನು ನೀಡಿದಂತಹ ದೂರುಗಳು ಸರ್ಕಾರದ ಗಮನಕ್ಕೆ ಬಂದಲ್ಲಿ ಅಂತಹ ಸಕ್ಷಮ ಪ್ರಾಧಿಕಾರಗಳ ಮೇಲೆ ನಿಷ್ಠುರವಾಗಿ ಸಕ್ಷಮ ಪ್ರಾಧಿಕಾರಿಗಳ ಮೇಲೆ ಶಾಸನ ಬದ್ಧ ಕ್ರಮ ಜರುಗಿಸುವುದಾಗಿ ಈ ಮೂಲಕ ಸರ್ಕಾರ ಸೂಚನೆ ನೀಡಿದೆ.

**ಎಂ.ಎಸ್. ಮರುಳಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 86

## ENERGY SECRETARIAT

**Subject:** Karnataka Electricity Regulatory Commission - Release of the amount to KERC out of the provision made in the Budget Estimates for the year 2003-04. - Orders reg.

**Read:** Letter No.F/01/1/2029, dated: 5.12.2003.

**PREAMBLE:**

A sum of Rs.320.50 lakhs has been provided in the Budget estimates for the year 2003-04 under the Head of Account 2801-80-101-1-07-KERC (Non-Plan). In the letter dated: 5.12.2003 read above, Secretary, KERC has requested to recoup the Permanent Imprest by releasing Rs.57.06 lakhs to meet the expenditures in the Third quarter of the year 2003-2004 (based on actual expenditure) in order to maintain the balance of Rs.75 lakhs in the Permanent Imprest Account sanctioned vide G.O. dated: 19.10.2002. Hence, this order.

**GOVERNMENT ORDER NO. DE 30 PSR 2001, BANGALORE, DATED: 19th January 2004.**

In the circumstances explained in the preamble, Government are pleased to release, the amount of Rs.57.06 lakhs (Rupees Fifty Seven Lakhs and Six Thousand only) based on the actual expenditure incurred by the Karnataka Electricity Regulatory Commission (KERC) under the Head of Account "2801-80-101-1-07-KERC (Non-Plan) to meet the expenditure for the Third quarter of the year 2003-04 and to maintain the balance of Rs.75 lakhs in the Permanent Imprest Account.

The Principal Secretary to Government, Energy Department is authorised to countersign the bill and to draw and disburse the amount to KERC on the payees receipt signed and submitted by the Secretary, KERC.

This Order issues with the concurrence of the Finance Department vide their U.O. Note No.FD 1299 Exp.1/2003, dated: 12.01.2004.

By Order and in the Name of the Governor of Karnataka,
**K.L. JAYARAM**
Under Secretary to Government, Energy Department.

PR-88

## INFORMATION, TOURISM AND YOUTH SERVICES SECRETARIAT

**Subject:** Constitution of Committee on Health Tourism Policy.

**Read:**
1) Recommendation of Revenue Reforms Commission.
2) The letter No. DTR/PUB/56/2003-04, dated: 23.12.2003 from the Commissioner of Tourism.

**PREAMBLE:**

The Revenue Reforms Commission in their First Report has dwelt on Health Tourism Policy and recommended for constitution of an expert committee to go into all aspects of Health Tourism in the State.

It should be ensured that the Health policy of the State should not come in the way of health tourist who comes for medical treatment from neighboring States and abroad.

As suggested by the Commissioner in their Report it is proposed to constitute a Committee comprising of some of the health entrepreneurs and the officers.

**GOVERNMENT ORDER NO. ITY 191 TTM 2003, BANGALORE, DATED: 20th January 2004.**

In the Circumstances explained above, a committee is constituted to go into the all aspects of Health Tourism in the State, with the following composition:

| | | |
|---|---|---|
| 1. | Hon'ble Minister for Tourism | Chairman |
| 2. | The Principal Secretary to Government, Health and Family Welfare Department. | Member |
| 3. | The Secretary to Government, Finance Department. | Member |
| 4. | The Secretary to Government, Information, Tourism and Youth Services Department. | Member |
| 5. | The Secretary to Government, Law Department. | Member |
| 6. | The Commissioner, Bangalore Mahanagara Palike. | Member |
| 7. | The Director of Health and Family Welfare Department. | Member |
| 8. | Dr. Devi Shetty, Narayana Hrudayalaya | Member |
| 9. | Dr. Kamini A. Rao, Bangalore Assisted Conception Centre. | Member |
| 10. | The Commissioner of Tourism | Member Secretary. |

This committee shall discuss the strategy and workout the modalities for preparing a draft health tourism policy.

By Order and in the Name of the Governor of Karnataka,

**S. SEETHAMMA**

Under Secretary to Government,

Information, Tourism and Youth Services Department.

PR-89

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧದ ಇಲಾಖಾ ವಿಚಾರಣೆ - ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 105 ಎಸ್‌ಇಎನ್ 99, ದಿನಾಂಕ: 27.05.2002.
2) ಜಿಲ್ಲಾಧಿಕಾರಿಗಳು, ಶಿವಮೊಗ್ಗ ರವರ ಪತ್ರ ಸಂಖ್ಯೆ: ಸಿಬ್ಬಂದಿ (3)-ಸಿಸಿಎ-02-02-03, ದಿ: 28.03.2003.
3) ನೋಟೀಸ್ ಸಂಖ್ಯೆ: ಸಿಆಸುಇ 105 ಎಸ್‌ಇಎನ್ 99, ದಿನಾಂಕ: 24.04.2003.
4) ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ: 18.05.2003.

**ಪ್ರಸ್ತಾವನೆ:**

1996-97ನೇ ಸಾಲಿನಲ್ಲಿ ತೀರ್ಥಹಳ್ಳಿ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ಸಾಲಿನಲ್ಲಿ ಇಂದಿರಾ ಆವಾಸ್ ಯೋಜನೆಯಡಿ ನಿರ್ಮಿಸಲಾದ 155 ಮನೆಗಳ ನಿರ್ಮಾಣದ ಪೈಕಿ 117 ಮನೆಗಳು ಪೂರ್ಣಗೊಂಡಿರುವುದಾಗಿ ವರದಿ ಸಲ್ಲಿಸಿ ತದನಂತರ ಸಲ್ಲಿಸಿದ 1996-97ನೇ ಸಾಲಿನ ಬಳಕೆ ಪ್ರಮಾಣ ಪತ್ರ ಹಾಗೂ ವಾರ್ಷಿಕ ವರದಿಯಲ್ಲಿ ಆ ವರ್ಷದ ಗುರಿ ಶೂನ್ಯ ಎಂಬುದಾಗಿ ವರದಿ ಸಲ್ಲಿಸಿ ಶಿವಮೊಗ್ಗ ಜಿಲ್ಲಾ ಪಂಚಾಯತ್‌ನ್ನು ತಪ್ಪು ದಾರಿಗೆ ಎಳೆದ ಆರೋಪಕ್ಕಾಗಿ ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 28.03.2003ರ ವಿಚಾರಣಾ ವರದಿ ಸಲ್ಲಿಸಿ ಆರೋಪಗಳ ಕುರಿತು ಈ ಮುಂದಿನಂತೆ ನಿರ್ಣಯ ನೀಡಿದರು.

ಶ್ರೀ ಹೆಚ್.ಎನ್. ರಾಮಕೃಷ್ಣ, ಕೆಎಎಸ್ ಅಧಿಕಾರಿ ಅವರು 1996-97ನೇ ಸಾಲಿನಲ್ಲಿ ತೀರ್ಥಹಳ್ಳಿ ತಾಲ್ಲೂಕು ಪಂಚಾಯತ್ ಕಾರ್ಯ ನಿರ್ವಾಹಕ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, 1996-97ನೇ ಸಾಲಿನಲ್ಲಿ ಇಂದಿರಾ ಆವಾಸ್ ಯೋಜನೆಯಡಿಯಲ್ಲಿ ಮಾರ್ಚ್ 97ರ ಪ್ರಗತಿ ವರದಿಯಲ್ಲಿ ನಿಗದಿಯಾಗಿದ್ದ 155 ಮನೆಗಳ ನಿರ್ಮಾಣದ ಪೈಕಿ 117 ಮನೆಗಳ ನಿರ್ಮಾಣ ಪೂರ್ಣ ಎಂದು ತಿಳಿಸಿ ಬಳಕೆ ಪ್ರಮಾಣ ಪತ್ರ ಹಾಗೂ ವಾರ್ಷಿಕ ವರದಿಯಲ್ಲಿ ಶೂನ್ಯ ಎಂದು ನಮೂದಿಸಿರುವುದು ಆಡಳಿತಾತ್ಮಕ ತೊಂದರೆಯಿಂದ ಆಗಿರುವುದೇ ವಿನಃ ಆರೋಪಿತ ಅಧಿಕಾರಿಯಿಂದ ಆಗಿರುವುದಿಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ. ಮೊದಲನೇ ಆರೋಪವು ಸಾಬೀತಾಗಿರುವುದಿಲ್ಲ. 1996-97ನೇ ಸಾಲಿನಲ್ಲಿ ತಾಲ್ಲೂಕಿಗೆ ದಶಲಕ್ಷ ಬಾವಿ ಯೋಜನೆಯಡಿಯಲ್ಲಿ 53 ಬಾವಿಗಳ ನಿರ್ಮಾಣದ ಭೌತಿಕ ಗುರಿ ನಿಗದಿಪಡಿಸಿದ್ದು ರೂ.23,93,162-00 ಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಅದರಲ್ಲಿ 33 ಬಾವಿಗಳು ಪೂರ್ಣವಾಗಿ ರೂ.11,26,169-00 ಗಳನ್ನು ಭರಿಸಿ ನಿಗದಿಯಾದ ವಾರ್ಷಿಕ ಗುರಿಗೆ ಶೇಕಡ 47.05 ರಷ್ಟು ಮಾತ್ರವೇ ಆಗಿರುತ್ತದೆ. ಪ್ರಗತಿ ವರದಿಯಲ್ಲಿ ಉಳಿಕೆ ರೂ.5,000-00 ಎಂದು ನಮೂದಿಸಿ ನಂತರ ಬಳಕೆ ಪ್ರಮಾಣ ಪತ್ರ ಹಾಗೂ ವಾರ್ಷಿಕ ವರದಿಯಲ್ಲಿ ರೂ.12,68,999-00 ಎಂದು ನಮೂದಿಸಿರುವುದು ಕಂಡು

ಬರುತ್ತದೆ. 1996-97ನೇ ಸಾಲಿನಲ್ಲಿ ಪ್ರಗತಿಯ ಅಂಶ ಶೇಕಡ 50 ಕ್ಕಿಂತ ಕಡಿಮೆಯಾಗಿದೆ. ಕಡಿಮೆ ಪ್ರಗತಿಯನ್ನು ಹೋಲಿಕೆ ಮೂಲಕ ತಾಳೆ ನೋಡಲು ಬೇರೆ ತಾಲ್ಲೂಕು ಅಧಿಕಾರಿಗಳ ಪ್ರಗತಿ ವಿವರಣೆ ಇರುವುದಿಲ್ಲ ಮತ್ತು ಆರೋಪಿತರು ಸೇವೆ ಸಲ್ಲಿಸಿದ ತಾಲ್ಲೂಕಿಗೆ ಸಂಬಂಧಿಸಿದ ಹಿಂದಿನ ಏಪ್ರಿಲ್ ಪ್ರಗತಿ ವರದಿಯನ್ನು ಸಹ ಹಾಜರುಪಡಿಸಿಲ್ಲ. ಆದ್ದರಿಂದ ನೇರವಾಗಿ ಆರೋಪಿತ ಅಧಿಕಾರಿಯು 1996-97ನೇ ಸಾಲಿನ ನಿಗದಿತ ಗುರಿಗಿಂತ ಕಡಿಮೆ ಪ್ರಗತಿ ಸಾಧಿಸಿದ್ದಾರೆ ಎಂದು ಹೇಳುವುದು ಕಷ್ಟ ಎಂಬ ಅಭಿಪ್ರಾಯವನ್ನು ನೀಡಿರುತ್ತಾರೆ. ಹೀಗಾಗಿ ಎರಡನೇ ಆರೋಪ ಭಾಗಶಃ ಸಾಭೀತಾಗಿದೆ.

ಮೇಲ್ಕಂಡ ವಿಚಾರಣಾ ವರದಿಯ ಪ್ರತಿಯನ್ನು ಮೇಲೆ (3) ರಲ್ಲಿ ಓದಲಾದ ನೋಟೀಸ್‌ನೊಡನೆ ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ ಅಧಿಕಾರಿ ಅವರಿಗೆ ಒದಗಿಸಿ ಅದರ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಈ ನೋಟೀಸ್‌ಗೆ ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ ಅಧಿಕಾರಿ ಅವರು ಮೇಲೆ (4) ರಲ್ಲಿ ಓದಲಾದ ಉತ್ತರ ಸಲ್ಲಿಸಿ 1996-97ನೇ ಸಾಲಿನ ಪ್ರಗತಿಯ ಅಂಶ ಶೇಕಡ 50 ಕ್ಕಿಂತ ಕಡಿಮೆಯಾಗಿದೆಯೆಂಬುದನ್ನು ಹೋಲಿಕೆ ಮೂಲಕ ತಾಳೆ ನೋಡಲು ಬೇರೆ ತಾಲ್ಲೂಕು ಅಧಿಕಾರಿಗಳ ಪ್ರಗತಿ ವಿವರಣೆ ಇರುವುದಿಲ್ಲ ಮತ್ತು ಇದೇ ತಾಲ್ಲೂಕಿನ ಹಿಂದಿನ ಏಪ್ರಿಲ್ ತಿಂಗಳ ಪ್ರಗತಿ ವರದಿಯನ್ನು ಸಹ ಹಾಜರುಪಡಿಸದೇ ಇರುವುದರಿಂದ 1996-97ನೇ ಸಾಲಿನಲ್ಲಿ ನಿಗದಿತ ಗುರಿಗಿಂತ ಕಡಿಮೆ ಪ್ರಗತಿ ಸಾಧಿಸಿದ್ದಾರೆ ಎಂಬ ಅಭಿಪ್ರಾಯವನ್ನು ಸಾಕ್ಷ್ಯಾಧಾರಗಳು ಮತ್ತು ಲಿಖಿತಾಧಾರಗಳ ಮೇಲೆ ನೀಡಿರುವುದಿಲ್ಲ. ವಿಚಾರಣಾಧಿಕಾರಿಗಳು ವರದಿಯಲ್ಲಿ ವಿವರಿಸಿರುವ ಅಂಶಗಳನ್ನಾಧರಿಸಿ ಪರಾಂಭರಿಸಿದಲ್ಲಿ ವಿಚಾರಣಾಧಿಕಾರಿಗಳು ಎರಡನೇ ಆರೋಪವು ಕೂಡ ರುಜುವಾತಾಗಿಲ್ಲವೆಂಬ ಅಭಿಪ್ರಾಯವನ್ನು ತಿಳಿಸಿರುವುದರಿಂದ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿಯ ಉತ್ತರವನ್ನು ದಾಖಲೆಗಳೊಡನೆ ಪರಿಶೀಲಿಸಲಾಗಿ ಅವರ ಕ್ರಮದಿಂದಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟಾಗದೇ ಇದ್ದರೂ ಸಹ ಸರ್ಕಾರದಿಂದ ಹಮ್ಮಿಕೊಳ್ಳಲಾದ ಸಮಾಜ ಕಲ್ಯಾಣ ಕಾರ್ಯಕ್ರಮದಲ್ಲಿ ಪ್ರಗತಿ ಸಾಧಿಸುವುದು ಅಷ್ಟೇ ಪ್ರಾಮುಖ್ಯವಾದ ಅಂಶವಾಗಿದೆ. ಅದರಲ್ಲಿ ಕಡಿಮೆ ಪ್ರಗತಿ ಆಗಿರುವುದನ್ನು ನಿರ್ಲಕ್ಷಿಸಲು ಬರುವುದಿಲ್ಲ. ಆದ್ದರಿಂದ ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ ಅಧಿಕಾರಿ ಅವರ ಉತ್ತರವನ್ನು ಒಪ್ಪದೇ ಎರಡು ಆರೋಪಗಳ ಪೈಕಿ ಎರಡನೇ ಆರೋಪ ಭಾಗಶಃ ಸಾಭೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಸರ್ಕಾರವು ದಂಡನೆ ವಿಧಿಸಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 105 ಎಸ್‌ಇಎನ್ 99, ಬೆಂಗಳೂರು, ದಿನಾಂಕ: 21ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹೆಚ್.ಎಸ್. ರಾಮಕೃಷ್ಣ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ಈ ಮೂಲಕ 'ವಾಗ್ದಂಡನೆ' ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 90

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಎಸ್. ಜಯಣ್ಣ, ವಕೀಲರು, ತಿಪಟೂರು, ತುಮಕೂರು ಜಿಲ್ಲೆ ಇವರನ್ನು ತಿಪಟೂರು ಕಂದಾಯ ತಾಲ್ಲೂಕು ಕ್ಷೇತ್ರದ ಬಿ.ಎಲ್. ರಂಗಪ್ಪ, ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಗೆ ನೋಟರಿಯಾಗಿ ನೇಮಕ ಮಾಡುವ ಬಗ್ಗೆ.-

**ಓದಲಾಗಿದೆ:** 1) ದಿನಾಂಕ: 2.8.2003ರ ಸರ್ಕಾರಿ ಪತ್ರ ಸಂಖ್ಯೆ: ಲಾ 18 ಎಲ್‌ಸಿಎಲ್ 2003.

2) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುಮಕೂರು ರವರ ಪತ್ರ ಸಂಖ್ಯೆ: ಬಿಟಿ.ಸಂ.5433:2003, ದಿನಾಂಕ: 29.9.2003.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 2.8.2003ರ ಸರ್ಕಾರಿ ಪತ್ರದಲ್ಲಿ ಶ್ರೀ ಬಿ.ಎಲ್. ರಂಗಪ್ಪ, ನೋಟರಿ, ತಿಪಟೂರು ಇವರ ನಿಧನದಿಂದ ತೆರವಾದ ನೋಟರಿ ಹುದ್ದೆಯ ಭರ್ತಿಗಾಗಿ ಅರ್ಜಿಗಳನ್ನು ಆಹ್ವಾನಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ಕೋರಲಾಗಿತ್ತು. ಮೇಲೆ ಓದಲಾಗಿರುವ (2) ದಿನಾಂಕ: 29.9.2003ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುಮಕೂರು ರವರು ಅರ್ಜಿಯನ್ನು ಆಹ್ವಾನಿಸಿ ಮೆಮೋ ರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 18 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 12ನೇ ಡಿಸೆಂಬರ್ 2003**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯಾ ಶ್ರೀ ಎಸ್. ಜಯಣ್ಣ, ವಕೀಲರು, ಎಸ್.ಡಿ.ಪಾಳ್ಯ, ತಡಸೂರು ಅಂಚೆ, ತಿಪಟೂರು, ತುಮಕೂರು ಜಿಲ್ಲೆ ಇವರನ್ನು ಬಿ.ಎಲ್. ರಂಗಪ್ಪನವರ ನಿಧನದಿಂದ ತೆರವಾದ ನೋಟರಿ ಹುದ್ದೆಗೆ ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ತಿಪಟೂರು ಕಂದಾಯ ತಾಲ್ಲೂಕು ಕ್ಷೇತ್ರದ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000-00 (ರೂ. ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 91 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀಮತಿ ಟಿ. ಹೇಮಾವತಿ, ನೋಟರಿ, ಮೈಸೂರು ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕುವ ಬಗ್ಗೆ ಹಾಗೂ ಶಾಶ್ವತವಾಗಿ ಅವರನ್ನು ನೋಟರಿಯಾಗಿ ನೇಮಕಾತಿ ಆಗದಂತೆ ತಡೆಯುವ ಬಗ್ಗೆ - ಆದೇಶ.

**ಉಲ್ಲೇಖ:**
1) ಸರ್ಕಾರಿ ಆದೇಶ ಲಾ 7 ಎಲ್‌ಸಿಎಲ್ 2001, ದಿನಾಂಕ: 7.3.2001.
2) ಜಿಲ್ಲಾ ನೋಂದಣಿ ಅಧಿಕಾರಿ ಮತ್ತು ಮುದ್ರಾಂಕಗಳ ಉಪ ಆಯುಕ್ತರ ಪತ್ರ ದಿನಾಂಕ: 28.7.2001.
3) ಸರ್ಕಾರಿ ಪತ್ರ ಸಂಖ್ಯೆ: ಲಾ 141 ಎಲ್‌ಸಿಎಲ್ 2001, ದಿನಾಂಕ: 18.8.2001.
4) ನೋಟರಿಯವರ ಲಿಖಿತ ಹೇಳಿಕೆ ದಿನಾಂಕ: 1.9.2001.
5) ಜಿಲ್ಲಾಧಿಕಾರಿ ಮತ್ತು ಜಿಲ್ಲಾ ದಂಡಾಧಿಕಾರಿ, ಮೈಸೂರು ಇವರ ಪತ್ರ ದಿನಾಂಕ: 1.9.2001.
6) ಸರ್ಕಾರಿ ಆದೇಶ ಸಂಖ್ಯೆ: ಲಾ 141 ಎಲ್‌ಸಿಎಲ್ 2001, ದಿನಾಂಕ: 2.1.2002.
7) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರ ಪತ್ರ ದಿನಾಂಕ: 23.9.2003.

**ಪ್ರಸ್ತಾವನೆ:**

ಶ್ರೀಮತಿ ಟಿ. ಹೇಮಾವತಿ, ನೋಟರಿ, ಮೈಸೂರು ಇವರನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 7.3.2001ರ ಸರ್ಕಾರಿ ಆದೇಶದಲ್ಲಿ ಮೈಸೂರು ಕಂದಾಯ ತಾಲ್ಲೂಕು ಕ್ಷೇತ್ರದ ಹೆಚ್ಚುವರಿ ನೋಟರಿಯಾಗಿ ನೇಮಿಸಲಾಗಿತ್ತು. ಮೇಲೆ ಓದಲಾದ ಕ್ರಮಾಂಕ (2) ದಿನಾಂಕ: 28.7.2001ರ ಪತ್ರದಲ್ಲಿ ಶ್ರೀ ಎ.ಎನ್. ನಾಗಭೂಷಣ ಆರಾಧ್ಯ, ಸ್ಟಾಂಪ್‌ವೆಂಡರ್ ಇವರ ಹತ್ತಿರ ಶ್ರೀಮತಿ ಟಿ. ಹೇಮಾವತಿ, ನೋಟರಿಯವರು ರೂ.10.00 ಮುಖಬೆಲೆಯ ಖಾಲಿ ಛಾಪಾ ಕಾಗದಗಳ ಮೇಲೆ ರುಜು ಮಾಡಿರುವ 38 ಛಾಪಾ ಕಾಗದಗಳು ಸಿಕ್ಕಿರುವುದಾಗಿ ಹಾಗೂ ಇವರೊಬ್ಬ ನ್ಯಾಯವಾದಿಯಾಗಿದ್ದು ಪ್ರಮಾಣ ಪತ್ರಗಳಿಗೆ ರೂ.20-00ರ ಛಾಪಾಕಾಗದ ಬೇಕೆಂದು ತಿಳಿಸಿದ್ದರೂ ಸಹ ರೂ.10-00 ಛಾಪಾ ಕಾಗದದ ಮೇಲೆ ರುಜುಮಾಡಿ ಸಾರ್ವಜನಿಕರಿಗೆ ಮೋಸ ಮಾಡುವುದರೊಂದಿಗೆ ಸರ್ಕಾರಕ್ಕೆ ನಷ್ಟ ಉಂಟು ಮಾಡಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (3) ದಿನಾಂಕ: 18.8.2001ರ ಸರ್ಕಾರಿ ಪತ್ರದಲ್ಲಿ ನೋಟರಿಯವರ ಲಿಖಿತ ಹೇಳಿಕೆ ಕೋರಿದ್ದು ಸದರಿ ಪತ್ರಕ್ಕೆ ಮೇಲೆ ಓದಲಾದ ಕ್ರಮಾಂಕ (4) ರಲ್ಲಿ ನೋಟರಿಯವರು ಲಿಖಿತ ಹೇಳಿಕೆ ಸಲ್ಲಿಸಿರುತ್ತಾರೆ. ಮೇಲೆ ಓದಲಾದ ಕ್ರಮಾಂಕ (5) ದಿನಾಂಕ: 1.9.01ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಇವರು ಸದರಿ ನೋಟರಿಯವರು ಜಾತಿ ದೃಢೀಕರಣ ಪತ್ರ ಕೋರಿರುವ ಅರ್ಜಿ ಜೊತೆ ಖಾಲಿ ಛಾಪಾ ಕಾಗದಗಳಿಗೆ ಪ್ರಮಾಣೀಕರಿಸಿ ಸಹಿ ಮಾಡಿರುವುದಾಗಿ ತಿಳಿಸುತ್ತಾ ತತ್ಸಂಬಂಧ ಛಾಪಾ ಕಾಗದವನ್ನು ಲಗತ್ತಿಸಿ ಕಳುಹಿಸಿರುತ್ತಾರೆ.

ಮೇಲಿನ ಆರೋಪಣೆಗಳ ಬಗ್ಗೆ ಸತ್ಯಾಸತ್ಯತೆಯನ್ನು ಪರಿಶೀಲಿಸಿ ವಿಚಾರಣೆ ನಡೆಸಲು ಉದ್ದೇಶಿಸಿ, ಮೇಲೆ ಓದಲಾದ ಕ್ರಮಾಂಕ (6) ದಿನಾಂಕ: 2.1.2002ರ ಸರ್ಕಾರಿ ಆದೇಶದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಮೇಲೆ ಓದಲಾದ (7) ದಿನಾಂಕ: 23.9.2003ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರು ವಿಚಾರಣೆ ನಡೆಸಿ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ಶ್ರೀಮತಿ ಟಿ. ಹೇಮಾವತಿಯವರು ಒಬ್ಬ ಜವಾಬ್ದಾರಿಯುತ ವಕೀಲರು ಹಾಗೂ ನೋಟರಿಯಾಗಿದ್ದರೂ ಸಹ ತಮ್ಮ ಅವಧಿಯಲ್ಲಿ ನೋಟರಿ ಕರ್ತವ್ಯವನ್ನು ಪ್ರಾಮಾಣಿಕವಾಗಿ ನಿರ್ವಹಿಸುವಲ್ಲಿ ವಿಫಲರಾಗಿ ವೃತ್ತಿಪರ ದುರ್ನಡತೆ ತೋರ್ಪಡಿಸಿರುತ್ತಾರೆಂಬುದು ನಿಸ್ಸಂದೇಹವಾಗಿ ಕಂಡುಬರುತ್ತದೆಂದು ತಿಳಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರ ಪ್ರಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 141 ಎಲ್‌ಸಿಎಲ್ 2001, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2003**

ಶ್ರೀಮತಿ ಟಿ. ಹೇಮಾವತಿ, ನೋಟರಿ, ಮೈಸೂರು ಖಾಲಿ ಛಾಪಾ ಕಾಗದಗಳ ಮೇಲೆ ರುಜುಹಾಕುತ್ತಿರುವುದಾಗಿ ಮತ್ತು ಅಭ್ಯರ್ಥಿಗಳ ಸಹಿಯಾಗದ ಜಾತಿ ಪ್ರಮಾಣ ಪತ್ರಗಳನ್ನು ದೃಢೀಕರಿಸಿರುವುದು ರುಜುವಾತಾಗಿ, ನೋಟರಿ ನಿಯಮಗಳು 1956ರ ನಿಯಮ 13(12) (ಬಿ) (1) ರೀತ್ಯ ಇವರ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ ಹಾಗೂ ಶಾಶ್ವತವಾಗಿ ಅವರನ್ನು ನೋಟರಿಯಾಗಿ ನೇಮಕಾತಿ ಆಗದಂತೆ ತಡೆಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 92 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

## SOCIAL WELFARE SECRETARIAT

**Subject:** Scheme of National Overseas Scholarship for SC/ST students issue of guidelines-reg.

**Read:** 1) No. SWD.355, PA-KA-VI 99, Dated: 13-6-2001.

2) Note from the Minister for Social Welfare in File No. SA.Ka.E. 366, PA-KA-VI-2003.

**PREAMBLE:**

The State Government has introduced the scheme of providing financial assistance to SC/ ST students for pursuing higher studies abroad in Master Degree, PhD and Post-Doctoral courses in Foreign Universities etc. Accordingly the State Government vide its Order No: SWD : 355 PAKAVI: 99 dtd: 13.6.2001 issued a set of rules to regulate the award of financial assistance to the Scheduled Caste / Scheduled Tribe students to prosecute higher studies in Foreign Universities.

The Ministry of Social Justice and Empowerment Govt. of India have issued regulations governing the scheme of National Overseas scholarships for Scheduled Caste / Scheduled Tribe students from 1998-99 to 2000-2001 for providing Financial Assistance to meritorious students for pursuing higher studies abroad in specified field of Master degrees, PhD, and Post-Doctoral degrees in the field of Engineering, Technology and Science.

Keeping in view of the increased nature of demand and the need for further improvement of the scheme as expressed by the Hon'ble Chairman of the Legislative Council and other members of the Council, Government have considered it necessary to issue further guidelines to regulate the award of financial help to of SC / ST students pursuing higher studies in Foreign Universities on lines of the Government of India Regulations.

**Government Order No. SWD 238 Pakavi 2003 (P), Bangalore, dated: 19th December 2003**

After examining all aspects of the matter and keeping in view the guidelines framed by Government of India, the State Government in super-session of earlier Government Order No. SWD 355 PAKAVI 99, dated: 13-6-2001, issue's the following regulations governing the scheme of financial assistance to SC/ ST students. These regulations/ Rules come with effect from the Date of their publication in the official Gazette.

The Regulations / Rules are annexed as annexure "A"

By Order and in the Name of the Governor of Karnataka

**B.KAMALAMMA**

Under Secretary to Government, Social Welfare Department.

**ANNEXURE-A**

**Regulations governing the scheme (annexure to G.O. No.SWD 238 Pakavi 2003(P), dated…19.12.2003 ) of overseas scholarship for SC/ST candidates from Karnataka.**

Following courses have been approved for undertaking studies under the Scheme. No award can be granted to any candidate to undertake studies in subjects other than those specified below.

1. Automation Robotics including Artificial Intelligence, Mechatronics and Manufacturing Technology.
2. Laser Technology.
3. Paper Technology.
4. Naval Architecture / Offshore structures.
5. Information Technology including Computer engineering, Software, Software Quality Assurance, Networking/ Connectivity Engineering, Communication System under Hazardous or Post-disaster conditions, Multi-Media Communication.
6. Low Temperature Thermal Dynamics.
7. Optometry.
8. Art Restoration Technology.
9. Ceramic & Glass Technology.
10. Dock and Harbour Engineering.
11. Industrial Safety.
12. Bio-Technology / Genetic Engineering.
13. Petroleum Technology.
14. Aircraft / Space Engineering.
15. Imaging System Technology.

16. Graphic Engineering.
17. Composite Materials Engineering including Decentralised Power Distribution (for solar heat) system, Energy Storage Engineering, Energy Conservation, Energy Efficient habitat Engineering.
18. Satellite / Remote Sensing.
19. Packaging Engg. / Technology.
20. Nuclear Engineering.

However, the Minister in charge of the Department may in special cases consider courses not listed which are not available in India and in the opinion of the Minister the course / study is required to be pursued abroad .

**ELIGIBILITY CONDITION**

I. **MINIMUM QUALIFICATIONS**

a. For Post Doctoral: - Ist class or 60% marks or equivalent grade in relevant Master Degree / Ph.D.
b. For PhD: - Ist Class or 60% marks or equivalent grade in relevant Master's Degree.
c. For Masters degree: - I st Class or 60% marks or equivalent grade in relevant Bachelors degree.

II. **AGE:**

Below 35 years, as from the date of commencement of the course/studies applied for and duelly authorized as per list enclosed.

III. **INCOME CEILING**

Total income from all sources of the employed candidate or his / her parents / guardians should not exceed Rs. 12,000/- per month (excluding such allowances are not treated as part of total income for the purpose of income-tax) as certified by the employer. A copy of latest tax assessment be also enclosed with application.

IV. **ONE CHILD IN A FAMILY AND ONE TIME AWARD**

Not more than one child of the same parent / guardians will be eligible and to this effect a self-certification will be required from the candidate. The awardee cannot be considered for the award for second or subsequent times as the individual can be awarded only once.

**OTHER MANDATORY CONDITIONS.**

I. The finally selected candidate shall obtain the required admission prior to the application made to the Government. The candidates are required to seek admission and join accredited Universities/Institutions only.

II. The selected candidate is required to execute a bond on non-judicial stamp paper before a notary-public with two sureties who will execute surety bonds separately for the actual amount to be spent by Govt. of Karnataka on the candidate or Rs.50, 000/- which ever is more. Each of surety bonds shall specify and cover for the estimated expenditure in Indian Rupees that would be incurred as travel expenses, tution fees, maintenance and contingency allowance, stipends, scholarship and other miscellaneous expenses on the awardee during the entire period of study abroad and shall become payable by the sureties jointly/and severally in case the awardee is declared a defaulter by the Govt. under the provision of the scheme. The candidate will accept the language of the bond as decided by the Govt. of Karnataka.

III. The selected candidate will also be required to execute a bond (Refer II above) to adhere to the prevailing laws of the foreign country, that the extension of stay abroad beyond completion of the course or duration of the scholarship under the scheme will not be permissible. The candidate/awardee shall not seek any extension of stay abroad beyond the duration for which the scholarship is awarded. The language of the bond as decided by Government of Karnataka will be acceptable to the candidate.

IV. The candidate shall not change the course of study or research for which scholarship has been sanctioned.

V. The selected candidate can pursue their respective studies in an accredited universities/institutions in a country of their choice which India has diplomatic relations. The candidates are required to make their own efforts in seeking admission in accredited Universities/Institutions in programmes/ fields specified in the scheme.

VI. In case the awardee has received overpayment or it is established either by any source or any Govt. agency that he/she has not used the amount provided for the specific purpose for which amount has

been given. , he/she is liable to refund the same to the Govt. of Karnataka and his/her employer (if any) is authorized to recover the amount/excess amount from his/her dues, on request from Govt. of Karnataka, and refund the same to Govt. of Karnataka. The amount is also liable to be recovered from the sureties.

VII. The decisions of Govt. of Karnataka will be final in all such issues, as may come up during course of time.

VIII. There may arise situations when an awardee pursuing Ph.D. or Post Doctoral Research in a University / Institution where one is initially registered with, find a serious situation where his / her guide has left and there are no immediate replacements thereof or the University/ Institutions has discontinued the research support facilities in the area where the awardee was pursuing Ph.D./ Post Doctoral research, the State of Karnataka in such cases are authorized to allow the awardee to change the University/ Institutions, after making such correspondence and is satisfied about such a need for change, however, to the condition that the credits earned by the awardee in the initial University/ Institution are accepted for transfer by; the second University/ Institutions and that the total period of award will remain unchanged even on such a transfer/ change, such change can be considered only in rare and accepted cases.

IX. The awardee shall furnish six months progress reports from the University/ Institutions where the awardee is pursuing his/her studies for which the award is given under the scheme. Unsatisfactory progress and adverse report if any will result in the discontinuation of the awardee being given further scholarship.

X. The performance of the candidate academically will be subjected to regular review of his / her performance to enable him/her to continue to avail the financial help.

XI. Further Govt. Order No. SWD 17: Pakavi 2002, Dated: 30-1-2001 and the terms contained therein shall mutandies apply.

**SELECTION COMMITTEE**

The committee comprises the following members will selected the candidates, the decision of the selection committee, will be final

| | |
|---|---|
| 1. The Principle Secretary, Social Welfare Dept. | Chairman |
| 2. The Secretary Finance Dept. | Member |
| 3. Director of technical Education | Member |
| 4. Director of Information Technology | Member |
| 5. The Commissioner Social Welfare Dept. | Member Secretary |

**FINANCIAL ASSISTANCE**

**I. VALUE OF MAINTENANCE / TRAVEL ALLOWANCE**

The total allowance of a maximum of Rs.3.50 lakhs per annum or a maximum of Rs. 10 lakhs for the entire course will be awarded to the awardee. The amount also covers the cost of airfare has been prescribed for all levels of courses covered under the scheme.

**DURATION OF AWARD WITH FINANCIAL ASSISTANCE**

The prescribed financial assistance is provided upto completion of the course/ research for a maximum of 3 years or whichever is earlier.

No extension of stay beyond prescribed period for levels of courses as mentioned above, will be considered.

**DEFAULT UNDER THE SCHEME**

In case a candidate pursuing studies abroad violates any of the terms and conditions of the bonds executed by him/ her and the educational Institution / University intimates the Indian Mission abroad or the Govt. of Karnataka about his/ her adverse reports on studies and / or conduct and/or that the candidate leaves for any other country or absconds or joins any other University or course/programme or/and returns to India in case of emergency without intimating the Govt. of Karnataka, he/she will be declared defaulter and will become liable for refund of entire amount spent on him/her along with the interest which will be 12% per annum w.e.f. from the date of commencement of the course/studies for which amount had been released to him/her and in case an awardee fails to repay the amount within six months from the date on which a demand for such refund is made, penal interest at the rate which is 2.5% higher than the above normal rate of interest on the outstanding amount would be charged. If the awardee fails to repay such amount along with interest thereon in the manner decided by Government of India, his/her sureties who have executed bonds, will be liable to pay the entire amount failing which the District Collector of the concerned district will realize the amount as arrears of land revenue.

**MODE OF SELECTION**

The Scheme will be advertised in the newspapers giving summarized information about the Scheme. The candidates shall after assessing their eligibility and suitability, as per conditions of the Scheme, apply to this Govt. of Karnataka (employed candidates through proper channel), in the prescribed application form which will form a part of the advertisement. The last date of receiving applications will also be mentioned in the advertisement. Thereafter, all applications received up to the last date of receiving applications, as notified in advertisement, will be put before the Screening Committee. The candidates short listed by the Screening Committee will be required to present themselves for personal interview before the Selection Committee. The merit list prepared, on the basis of assessment of individual candidates, by the Selection Committee will finally and decisively complete the selection procedure to decide the merit. In case of tie-up of two or more candidates (obtaining same percentage of marks/credits), the one who is eldest in age (as per date of Birth) will be placed above the others, as per respective dates of birth as recorded in Secondary School Certificate as may be issued to him/her.

**DOCUMENTS**:

The candidates who are selected under this scheme should fulfill the following conditions:

1. The candidate proceeding for higher studies in foreign countries shall furnish certified copy of current Passport and VISA to the country of study.

2. The candidate proceeding to the foreign country for higher studies shall make available copy of the Air ticket issued by the concerned Traveling Agencies and reaching destination shall produce copy of the Boarding ticket issued to him/her.

3. The candidate shall furnish certified copies of the fee receipt/tution fees in respect of the admission and fee paid etc.

4. The candidate shall furnish certified copy of the letter issued by the Foreign Universities on his/her journey to join the course/institution etc.

5. The candidate shall furnish the progress report of his/her performance issued by the concerned, from time to time, by Foreign Institution.

6. The candidate shall furnish certified copies on completion of higher studies in Foreign University.

7. The selected candidates shall compulsorily complete the course and pass the prescribed examination. The candidate is liable to remit back the financial assistance sanctioned by Govt. in case of non-completion of the course/study.

8. This would apply to all previous sanctioned by Govt.

**FURNISHING OF FALSE INFORMATION**

If any candidate has furnished any false information/document and is established as false, he/she will be debarred from the award and if he/she has availed of it or is availing, an action will be initiated for recovery of the amount spent with 15% compound interest thereon. Such candidate will also be black listed for future and the employed candidate will also have to face departmental action for such act, for which the Government of India will take up the matter with their respective employers.

**REPEAL:** Govt. of Karnataka retain absolute authority / right to act / decide on any matter of dispute/ or difference arising out of the transaction between the State Govt. and the student covered under the scheme. Govt. is empowered to revise and modify the scheme as and when it seems is necessary.

**B.KAMALAMMA**
Under Secretary to Government,
Social Welfare Department.

PR-112

**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ:** ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಪಡಿತರ ವ್ಯವಸ್ಥೆಯ ಮೂಲಕ ಅಯೋಡೈಸ್ಡ್ ಸತ್ವವುಳ್ಳ ಉಪ್ಪನ್ನು ವಿತರಿಸುವ ಕುರಿತು-ಅನುಮೋದನೆ.

**ಓದಲಾಗಿದೆ:** 1. ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ರವರ ಅ.ಸ. ಪತ್ರ ಸಂಖ್ಯೆ: ಎಫ್‌ಎಸ್:ಪಿಡಿ:III:23: 2003-04 ದಿನಾಂಕ: 23.1.2004.

**ಪ್ರಸ್ತಾವನೆ:**

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಆಯುಕ್ತರು ಮೇಲೆ ಓದಲಾದ ಪ್ರಸ್ತಾವನೆಯನ್ನು ಸಲ್ಲಿಸಿ ಅಯೋಡೈಸ್ಡ್ ಉಪ್ಪನ್ನು ನ್ಯಾಯಬೆಲೆ ಅಂಗಡಿ ಮುಖಾಂತರ ಸಾರ್ವಜನಿಕ ವಿತರಣಾ

ವ್ಯವಸ್ಥೆಯಡಿಯಲ್ಲಿ ಅದರಲ್ಲೂ ಗ್ರಾಮೀಣ ಮಟ್ಟದಲ್ಲಿ ಸುಲಭ ದರದಲ್ಲಿ ಮಾರಾಟ ಮಾಡುವ ಪ್ರಸ್ತಾವನೆ ಸಲ್ಲಿಸಿದ್ದಾರೆ. ಗ್ರಾಮೀಣ ಮಟ್ಟದಲ್ಲಿ ಬಹುತೇಕ ಅಯೋಡೈಸ್ಡ್ ಉಪ್ಪು ಲಭ್ಯವಿಲ್ಲದೆ ಜನತೆಯ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತಿದ್ದು ಈ ಹಿನ್ನೆಲೆಯಲ್ಲಿ ಗ್ರಾಹಕರ ಆರೋಗ್ಯ ದೃಷ್ಟಿಯಿಂದ ಹಾಗೂ ಈಗಿನ ಮಾರುಕಟ್ಟೆಯ ಬೆಲೆ ಹೆಚ್ಚುಗಾರಿಕೆಯನ್ನು ಗಮನಿಸಿ ನಮ್ಮ ರಾಜ್ಯದ ನಮ್ಮದೇ ಆದ ನಾಮ ನಿರ್ದೇಶನದಡಿ ಅಯೋಡೈಸ್ಡ್ ಉಪ್ಪನ್ನು ಮಾರಾಟ ಮಾಡುವ ಬಗ್ಗೆ ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ.

ಕೇಂದ್ರ ಸರ್ಕಾರದ ಅಧೀನದಲ್ಲಿ ಬರುವ ಉಪ್ಪು ಆಯೋಗ ಇದರ ಅಧಿಕೃತ ಉಪ ಆಯುಕ್ತರ ಕಛೇರಿ ಚೆನ್ನೈ-06 ರಲ್ಲಿದ್ದು 15/5/03 ರಿಂದ 25/5/03 ರಲ್ಲಿ Mobile Testing Laboratory ಯೊಂದಿಗೆ ಮತ್ತು IDD Cell, DPH ಕಛೇರಿ, ಬೆಂಗಳೂರು ಇದರ ಸಿಬ್ಬಂದಿಯೊಡನೆ ರಾಜ್ಯದ 10 ಜಿಲ್ಲೆಗಳಲ್ಲಿ ಸಮೀಕ್ಷೆಯನ್ನು ನಡೆಸಿದರು. ಈ ಸಮೀಕ್ಷೆಯ ಸಮಯದಲ್ಲಿ ಹಲವಾರು ಉಪ್ಪು ತಯಾರಕರು ಹಾಗೂ ಅಧಿಕೃತ ವಿತರಕರು ತಯಾರು ಮಾಡಿ ಮಾರುಕಟ್ಟೆಗೆ ಬಿಡುಗಡೆ ಮಾಡಿದ-ಮಾರುಕಟ್ಟೆಯಲ್ಲಿ ಲಭ್ಯವಿದ್ದ ಅಯೋಡಿನ್ ಉಪ್ಪಿನ ಪೊಟ್ಟಣ ಗಳನ್ನು ತಪಾಸಣೆ ಮಾಡಿದರು. Mobil Testing Lab. ನಲ್ಲಿ ತಪಾಸಣೆಗೊಂಡ ಅಯೋಡಿನ್ ಉಪ್ಪಿನ ಫಲಿತಾಂಶದಲ್ಲಿ ಇರಬೇಕಾದ ಅಯೋಡಿನ್ ಅಂಶಕ್ಕಿಂತ ಶೇ.15 ppm ಅಯೋಡಿನ್ ಕಡಿಮೆ ಇರುವುದು, ಕೆಲವು ಉಪ್ಪಿನ ಪೊಟ್ಟಣಗಳಲ್ಲಿ ಅಯೋಡಿನ್ ಇಲ್ಲದಿರುವುದು ಗಮನಿಸಿರುತ್ತಾರೆ. ಕೇಂದ್ರ ಸರ್ಕಾರವೂ ಕೂಡ ಅಯೋಡಿನ್ deficiency ಮತ್ತು ಇದರಿಂದ ಆರೋಗ್ಯ ಕಲುಶಿತಗೊಳ್ಳುವ ಅಂಶವನ್ನು ತಡೆಗಟ್ಟುವ ಸಲುವಾಗಿ iodised salt ಅನ್ನು ಉಪಯೋಗಿಸುವುದು ಅತಿ ಅವಶ್ಯ ಎಂದೂ ಕೂಡ ಕೇಂದ್ರ ಸರ್ಕಾರ ಪ್ರತಿಪಾದಿಸಿದೆ. ಈ ಸಂಬಂಧ ಉಪ ಆಯುಕ್ತರು, ಉಪ್ಪು ಆಯೋಗ, ಚೆನ್ನೈ ಇವರು ಉಪ್ಪು ತಯಾರಿಕಾ ಕಂಪನಿಗಳಿಗೆ ಬರೆದ ಪತ್ರ ಸಂ. 13012(5)NIDCCP/S&D/95/III/12960-13037 ದಿನಾಂಕ 18.07.2003 ನ್ನು ಆಧರಿಸಿ ಗ್ರಾಮೀಣ ಮಟ್ಟದಲ್ಲಿ ಅಯೋಡಿನ್ ಬೆರೆತ ಉಪ್ಪನ್ನು ಉಪಯೋಗಿಸುವುದು ಸೂಕ್ತವೆಂದು ಉದ್ದೇಶಿಸಿ ಸರ್ಕಾರ ಇದನ್ನು ಜಾರಿಗೆ ತರಲು ಉದ್ದೇಶಿಸಿದೆ.

ತತ್ಸಂಬಂಧದಲ್ಲಿ ಆಯುಕ್ತರು, ಆ.ನಾ.ಸ. ಇಲಾಖೆ, ಬೆಂಗಳೂರು ತಮಿಳು ನಾಡಿನ ಉಪ್ಪು ನಿಗಮ ನಿಯಮಿತದೊಂದಿಗೆ ಚರ್ಚಿಸಿ ಗುಣಮಟ್ಟದ ಬಗ್ಗೆ ಖಾತರಿಪಡಿಸಿಕೊಂಡು(ತಮಿಳು ನಾಡು ಉಪ್ಪು ನಿಗಮದ ಉಪ್ಪಿನ ಗುಣಮಟ್ಟದ ಪರಿಶೀಲನೆಗೆ ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿ., ಇವರು ಮೈಸೂರಿನ CFTRI ಅನ್ನು ಕೋರಿದ್ದು ಸದರಿ ಸಂಸ್ಥೆಯು ಅವರಿಗೆ ಕಳುಹಿಸಿದ ಉಪ್ಪಿನ ಸ್ಯಾಂಪಲ್ ಅನ್ನು ವಿಶ್ಲೇಷಣೆ ಮಾಡಿ ಸದರಿ ಉಪ್ಪು ಆಹಾರ ಕಲಬೆರಕೆ ತಡೆಗಟ್ಟುವಿಕೆ ಕಾಯಿದೆ 1994 ಹಾಗೂ ನಿಯಮಾವಳಿಗಳ ಅಡಿಯಲ್ಲಿ ವಿಧಿಸಿರುವ ನಿರ್ದಿಷ್ಟಗಳಿಗೆ ಸರಿಹೊಂದುವುದೆಂದು ಪ್ರಮಾಣ ಪತ್ರ ನೀಡಿರುತ್ತಾರೆ). ಈ ಉಪ್ಪು ನಾಲ್ಕು ವಿವಿಧ ಬಣ್ಣಗಳಲ್ಲಿ ಪ್ಯಾಕ್ ಮಾಡಿರುವ ಉಪ್ಪನ್ನು ಅರ್ಧ ಕೆ.ಜಿ. ಮತ್ತು ಒಂದು ಕೆ.ಜಿ. ಪೊಟ್ಟಣಗಳಲ್ಲಿ ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಗೆ ತಲುಪಿಸುವ ಬಗ್ಗೆ ವಿವರವಾದ ದರದ ಪಟ್ಟಿಯನ್ನು ಪ್ರಸ್ತಾವನೆಯೊಂದಿಗೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ. ಆನಾಸ 05 ಆರ್‌ಪಿಆರ್ 04 ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ನ್ಯಾಯಬೆಲೆ ಅಂಗಡಿಯ ಮುಖಾಂತರ ಅಯೋಡೈಸ್ಡ್ ಸತ್ವವುಳ್ಳ ಉಪ್ಪನ್ನು ಒಂದು ಕೆ.ಜಿ. ಪ್ರಮಾಣದ ಪೊಟ್ಟಣಗಳನ್ನು **"ಸುರುಚಿ ಸಾಲ್ಟ್"** ಎಂಬ ನಾಮಾಂಕಿತದಲ್ಲಿ ಮಾರಾಟ ಮಾಡಲು ಸರ್ಕಾರವು ಅನುಮತಿಯನ್ನು ನೀಡಲಾಗಿದೆ. ತತ್ಸಂಬಂಧದಲ್ಲಿ ಈ ಕೆಳಕಂಡ ದರಪಟ್ಟಿಯನ್ನು ಅನುಮೋದಿಸಿದೆ:

| ಕ್ರ.ಸಂ. | ದರ ವಿವರಗಳು | ಕ್ವಿಂಟಾಲ್ ಒಂದಕ್ಕೆ ದರ |
|---|---|---|
| 1 | ತಮಿಳುನಾಡು ಸಗಟು ಮಾರಾಟ ಮಳಿಗೆಯಿಂದ ತಾಲ್ಲೂಕು ಮಾರಾಟ ಮಳಿಗೆಗಳಿಗೆ ಸರಬರಾಜು<br>ಅ) ಸಾಗಾಣಿಕೆ ವೆಚ್ಚ<br>ಆ) ಅನ್‌ಲೋಡಿಂಗ್ ಚಾರ್ಜಸ್ ತಾಲ್ಲೂಕು ಸಗಟು ಮಳಿಗೆಗಳಲ್ಲಿ<br>ಇ) ಪ್ರಚಾರ ಮತ್ತು ಮಾರಾಟ ವೆಚ್ಚ | 230-00 |
| 2 | ಸಗಟು ಸೋಡಿ | 20-00 |
| 3 | ಸಗಟು ಮಾರಾಟ ದರ | 255-00 |
| 4 | ಚಿಲ್ಲರೆ ಸೋಡಿ | 50-00 |
| 5 | ಚಿಲ್ಲರೆ ಮಾರಾಟ ದರ | 300-00 |
| 6 | ಕೆ.ಜಿ.ಒಂದಕ್ಕೆ ಕನಿಷ್ಠ ಚಿಲ್ಲರೆ ದರ | 3-00 |

ಉಪ್ಪು ದಾಸ್ತಾನು ಕಾಲಕಾಲಕ್ಕೆ ಪೂರೈಕೆ ಮತ್ತು ಅದರ ಗುಣಮಟ್ಟ ಕಾಯ್ದುಕೊಳ್ಳುವ ಬಗ್ಗೆ ಪ್ರಚಾರತೆ, ದರಪಟ್ಟಿ ನಿಗದಿತ ಅವಧಿವರೆವಿಗೆ ಕಾಯ್ದುಕೊಂಡು ಬರುವುದರ ಬಗ್ಗೆ ಲೆಕ್ಕ ಹೊಂದುವ ಬಗ್ಗೆ ಪ್ರತ್ಯೇಕವಾಗಿ ಒಡಂಬಡಿಕೆಯನ್ನು ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಮತ್ತು ತಮಿಳುನಾಡು ಉಪ್ಪು ನಿಗಮ ನಿಯಮಿತ ಮಧ್ಯೆ ಮಾಡಿಕೊಳ್ಳತಕ್ಕದ್ದು.

ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಇವರು ಈ ಬಗ್ಗೆ ಲೆಕ್ಕವಿಧಾನದ ರೂಪು ರೇಶೆಗಳನ್ನು ಸಿದ್ದಪಡಿಸಿ ಸಗಟುದಾರರು ಹಾಗೂ ಚಿಲ್ಲರೆ ಮಾರಾಟದಾರರಿಗೆ ಪ್ರತ್ಯೇಕವಾಗಿ ಹೊರಡಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಜೇಂದ್ರ**

ಪಿ.ಆರ್. 120 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject:** Diversion of 0.80 ha of forest land for renewal of lease in Sy.No.323 A1 of Kumta(V) for further period of 10 years in favour of Jamatul-ul-muslimeen Kumta for Idga and Arabic School etc.

**Read:**
1) Letter No.A5(2)GFI.CR.10/2000-01 dated 26-9-2001,5.7.2002, 13.9.2002 and 21.8.2003 of Principal Chief Conservator of Forests, Bangalore
2) State Government letter No.FEE 274 FGL 2001, dated:24.10.2001, 31.7.2002, 9.10.2002 and 1.9.2003.
3) Letter No.F(C)A/11.2/226/KAR/BC, dated 24-12-2001, 4.10.2002 and 15.10.2003 of Government of India, Ministry of Environment and Forests, Regional Office, (South Zone), Bangalore

**PREAMBLE:**

The Principal Chief Conservator of Forests, Bangalore vide his letter dated 26.9.2001 read at (1) above has submitted proposal to State Government to obtain the approval of Government of India under Section 2 of Forest (Conservation) Act 1980, for renewal of lease of 0.80 ha. of forest land in Sy.No.323 A1 of Kumta for further period of 10 years from 13.3.1998 in favour of the President of Jamatul-ul-Muslimeen, Kumta for Idga ground and also to run Arabic School subject to certain conditions.

Accordingly, the proposal has been recommended to Government of India vide State Government letter dated: 24.10.2001 read at (2) above.

Government of India Ministry of Environment and Forests, Regional Office, (South Zone), Bangalore vide their letters dated: 24-12-2001 and 4.10.2002 read at (3) above has sought some additional information and the same has furnished by the Principal Chief Conservator of Forests, Bangalore vide his letters dated 5-7-2002, 13.9.2002 and 21.8.2003 read at (1) above and the same was sent to Government of India vide letters dated: 31.7.2002, 9.10.2002 and 1.9.2003 read at (2) above.

Government of India, Ministry of Environment and Forests, Regional Office, (South Zone), Bangalore vide their letter dated: 15-10-2003 read at (3) above has conveyed its approval (Stage-II) under section (2) of Forest (Conservation) Act, 1980 for diversion of 0.80 ha. of forest land for renewal of lease in Sy.No.323 A1 of Kumta Village, Kumta Taluk, Honnavar Forest Division in U.K. District in favour of President of Jamatul-ul-Muslimeen, Kumta for Idga ground and also to run Arabic School for a period of 10 years w.e.f. 13.03.1998 subject to certain conditions.

The proposal has been examined in detail and hence the orders.

**GOVERNMENT ORDER NO. FEE 274 FGL 2001, BANGALORE, DATED: 29th January 2004**

In the circumstances explained in the preamble above, Government are pleased to accord sanction under section 2 of Forest (Conservation) Act 1980 for diversion of 0.80 ha. of forest land for renewal of lease in Sy.No.323 A1 of Kumta Village, Kumta Taluk, Honnavar Forest Division in U.K. District in favour of President of Jamatul-ul-Muslimeen, Kumta for Idga ground and also to run Arabic School for a period of 10 years w.e.f. 13.03.1998 subject to following conditions.

1. The legal status of forest land shall remain unchanged.
2. The period of lease shall be for 10 years w.e.from 13.3.1998.
3. The lessee has to pay the lease rent as fixed by the Government from time to time.

4. The cost of raising compensatory afforestation over an extent of 1.6 ha. of degraded forest land shall be recovered from user agency at the rate prevailing at the time of approval (Now it is Rs.54,200.00 per ha.)
5. The compensatory afforestation shall be raised over 1.6 ha. of degraded forest land at the cost of user agency.
6. The total forest land area utilised for the project shall not exceed 0.80 ha. In case the land is not used for the stipulated purpose, then the area will be resumed by Forest Department.
7. The user agency has to pay the net present value of the forest land at the rate prescribed in Notification No.FEE 247 FGL 2002 dated: 17.1.2004.
8. Any other conditions to be stipulated by the Government of India/Government of Karnataka and the Principal Chief Conservator of Forests, Karnataka in the interest of conservation of forests.

By Order and in the Name of the Governor of Karnataka,

**S.R. VATSALA**

PR-126

Under Secretary to Government,
Forest, Ecology and Environment Department.

**Subject:** Renewal of mining lease of Sri. S.A. Tawab, Bellary for Iron Ore over an area of 31.60 ha. in Ramghad Village. R.M.Block, Sandur Range, Bellary District.

**Read:**
1) Letter No.A5(B1)MNG.CR.22/89-90 dt:13-8-1990, 22.2.1993, 29.3.1995, 14.5.1997, 4.1.1998 and 21.9.2001.
2) State Government letter of even number dt: 20.6.1992, 9/13.1.1997,10.6.1997, 1/3.4.1998 and 2.7.2002.
3) Government of India, Ministry of Environment and Forests, New Delhi letter No. 8-172/92-FC dated: 23.12.1992,6.2.1997,28.8.1997,2.6.1998, 14.9.2001 and 24.4.2003.

**PREAMBLE:**

The Chief Conservator of Forests (General), had sent proposal to Government vide his letter dated 13.8.1990 read at (1) above for renewal of mining lease of Sri. S.A. Tawab, Bellary for Iron Ore over an area of 31.60 ha. in Ramghad Village. R.M.Block, Sandur Range, Bellary District as per provision of Forest (Conservation) Act,1980 subject to certain conditions.

The proposal was recommended to Government of India vide Government letter dt: 20-6-1992 read at (2) above seeking prior approval under Forest(Conservation) Act,1980. After careful consideration of the proposal of the State Government Central Government in their letter dated 23.12.1992, has agreed in principle approval for diversion of 24.720 ha. of forest land for mining of iron ore in favour of Sri. S.A.Tawab subject to fulfillment of certain conditions.

In compliance of the conditions of the Principal Chief Conservator of Forests in his letter dated 29.3.1995 read at (1) above has submitted his report. The compliance report was forwarded to Government of India vide State Government letter dated 9/13.1.1997 read at (2) above.

Government of India, Ministry of Environment and Forests in its letter dated 6.2.1997 read at (3) above have asked information on certain points. The same was furnished vide State Government letter dated 10.6.1997 read at (2) above.

Further the Principal Chief Conservator of Forests in his letter dated 4.1.1998 read at (1) above have requested to get clarification from the Government of India whether penal afforestation to be taken up in degraded forest area over double the extent of whole lease area or double the extent of lease area to be broken up afresh. This was got clarified by Government of India vide its letter dated 2.6.1998 read at (3) above.

The Principal Chief Conservator of Forests in his letter dated 21.9.2001 read at (1) above have submitted compliance report as the user agency fulfilled the conditions stipulated in Government of India letter dated 23.12.1992. The compliance report was forwarded to Government of India vide State Government letter dated 2.7.2002 read at (2) above.

Finally Government of India vide its letter dated 24.4.2003 read at (3) above after careful consideration of the proposal of the State Government, has conveyed its final approval under Section-2 of the Forest (Conservation) Act,1980 for diversion of 24.72 ha. forest land (excluding 6.94 ha. meant for

afforestation) for renewal of mining lease for iron ore in favour of Shri. S.A. Tawab in District Bellary subject to certain conditions. Hence, this order.

**GOVERNMENT ORDER NO. FEE 63 FFM 90, BANGALORE, DATED: 27th January 2004.**

After examining all aspect of the matter and in view of the approval accorded to the proposal by Government of India, Ministry of Environment and Forests, New Delhi, Government are pleased to accord its approval under section-2 of Forest(Conservation) Act,1980 for diversion of 24.72 ha. of forest land (excluding 6.94 ha. meant for afforestation) in Ramghad Village, R.M.Block, Sandur Range, Bellary District for renewal of mining lease for iron ore in favour of Sri. S.A. Tawab in District Bellary subject to the following conditions:

1. Legal status of the forest land shall remain unchanged.
2. Compensatory afforestation shall be raised over equivalent non-forest land in lieu of 7.10 ha. forest land to be broken up afresh at the project cost.
3. The non-forest land transferred to Forest Department for compensatory aforestation shall be declared Protected forest/Reserve forest under Indian Forest Act,1927.
4. Penal compensatory afforestation shall be raised over double the degraded forest land at the project cost.
5. Fencing, protection and regeneration of the safety zone area will be done at the project cost. Besides this, afforestation over one and half times of safety zone area in degraded forest elsewhere will be done at the project cost.
6. Demarcation of mining lease area will be done on the ground at project cost using four feet high reinforced cement concrete pillars with serial numbers, forward and back bearings and distance from pillar to pillar.
7. The user agency will make arrangement for free supply of fuelwood preferable alternate energy cource to labourers and staff working on the project site so as to avoid any pressure on the adjacent forest areas.
8. Reclamation of lease areas will be done as per plan in consultation with the State Forest Department at the cost of user agency.
9. The period of permission for lease under the Forest(Conservation) Act,1980 will be for a maximum period of 20 years co-terminus with lease under MMRD Act,1957.
10. The approval under the Forest(Conservation)Act,1980 is subject to the clearance under Environment (Protection)Act, 1986, if applicable.
11. Any other condition that the State Government or the Chief Conservator of Forests(Central),Reginal Office, Bangalore may impose from time to time in the interest of afforestation and protection of forests.
12. The lessee shall pay usual lease rent and supervision charges as prescribed by the Government from time to time.
13. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.
14. The lessee shall take up planting work on the static dumps during the advance mining operations.
15. The lessee shall undertake the afforestation measures in the area proposed for afforestation and also in other vacant areas of the leased area.
16. The lessee shall carry out soil and water conservation measures and other necessary measures as advised by the Forest Department both in leased area and in surrendered area.
17. The lessee shall undertake to protect rigidly the leased area and forest area surrounding the area upto one Km. From the leased area.
18. The lessee shall not cut any trees with out prior permission of the Forest Department and all produce of permitted fellings shall be handed over to Forest Department under cover of receipt. Transportation of ore should be strictly as per transit rules in force.
19. The lessee shall abide by all the conditions prescribed by Government of India and Government of Karnataka.
20. The lessee shall execute an agreement with the Forest Department binding himself to abide by all usual conditions and terms as per orders of the Government as well as Principal Chief Conservator of Forests.

21. In case of violation of agreement conditions the Forest Department shall have right to suspend the mining activities.

By Order and in the Name of the Governor of Karnataka,

**S.R. VATSALA**

PR-127

Under Secretary to Government,

Forest, Ecology and Environment Department.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶದಲ್ಲಿನ ಏಳು ಸಿಟಿಮುನ್ಸಿಪಲ್ ಕೌನ್ಸಿಲ್(ಸಿ.ಎಂ.ಸಿ) ಮತ್ತು ಒಂದು ಪಟ್ಟಣ ಪುರಸಭೆ(ಟಿ.ಎಂ.ಸಿ)ಗಳಿಗೆ ಸಂಚಿತ ಹಣಕಾಸಿನ ಚೌಕಟ್ಟಿನೊಂದಿಗೆ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆ ಮಂಜೂರಾತಿ - ಆದೇಶ ಬಗ್ಗೆ.

**ಓದಲಾಗಿದೆ:** 1) ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಬಿಡಬ್ಲೂಎಸ್‌ಎಸ್‌ಬಿ, ಇವರಿಗೆ ಬರೆದ ಸರ್ಕಾರದ ಪತ್ರ ಸಂಖ್ಯೆ.ಯುಡಿಡಿ 27 ಎಂಎನ್‌ಐ 2001, ದಿನಾಂಕ.27-8-2001.

2) ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಬಿಡಬ್ಲೂಎಸ್‌ಎಸ್‌ಬಿ, ಇವರ ಪತ್ರ ಸಂಖ್ಯೆ. ಬಿಡಬ್ಲೂಎಸ್‌ಎಸ್‌ಬಿ/ಸಿಇ/ಎಸಿಎಇ(ಪಿ)ಟಿಎ.3/940/2001-02 ದಿನಾಂಕ.13-3-2001 ಮತ್ತು ಸಂಖ್ಯೆ. ಬಿಡಬ್ಲೂಎಸ್‌ಎಸ್‌ಬಿ/ಸಿಇ(ಪಿ)465/2002-03, ದಿನಾಂಕ.6-12-2002.

3) ವ್ಯವಸ್ಥಾಪಕ ನಿರ್ದೇಶಕರು, ಕೆಯುಐಡಿಎಫ್‌ಸಿ ಇವರ ಪತ್ರ ಸಂಖ್ಯೆ.ಕೆಯುಐಡಿಎಫ್‌ಸಿ/ ಇಎನ್‌ಜಿ/ಕೆಯುಡಬ್ಲ್ಯೂಎಎಸ್.ಎಸ್.ಐ.ಪಿ/2003-04/3817, ದಿನಾಂಕ.18-7-2003.

**ಪ್ರಸ್ತಾವನೆ:-**

ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವಂತಹ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರ, ರಾಜರಾಜೇಶ್ವರಿನಗರ ಮತ್ತು ಯಲಹಂಕ ಈ ಏಳು ನಗರಸಭೆಗಳು ಮತ್ತು ಕೆಂಗೇರಿ ಪಟ್ಟಣ ಪುರಸಭೆಗಳಲ್ಲಿ 2001ರ ಜನಗಣತಿ ಪ್ರಕಾರ ಒಟ್ಟು ಜನಸಂಖ್ಯೆ 12 ಲಕ್ಷ ಇದ್ದು, ಈ ಪ್ರದೇಶಗಳು ಕ್ಷಿಪ್ರ ಗತಿಯಲ್ಲಿ ಬೆಳೆಯುತ್ತಿವೆ. ಆದರೆ, ನಗರದ ನಾಗರೀಕರಿಗೆ ಲಭ್ಯವಿರುವಂತಹ ಕಾವೇರಿ ನೀರಿನ ಸರಬರಾಜು ಮತ್ತು ಒಳಚರಂಡಿ ಸಂಗ್ರಹಣೆ/ವಿಲೇ ಸೇವೆಗಳು ಈ ಪ್ರದೇಶಗಳಲ್ಲಿ ದೊರಕುತ್ತಿಲ್ಲ. ಮೇಲ್ಕಂಡ ನಗರ ಸ್ಥಳೀಯ ಸಂಸ್ಥೆಗಳಿಗೆ ಸದರಿ ಸೌಲಭ್ಯ ಗಳನ್ನು ಒದಗಿಸಲು ಕರ್ನಾಟಕ ಸರ್ಕಾರವು ಬದ್ಧವಾಗಿದ್ದು, ಈ ವಿಷಯವು ಕೆಲವು ಕಾಲದಿಂದ ಸರ್ಕಾರದ ಪರಿಶೀಲನೆಯಲ್ಲಿದೆ. ಕರ್ನಾಟಕ ಸರ್ಕಾರವು 1998ರಲ್ಲಿ ಈ ಪ್ರದೇಶಗಳಲ್ಲಿ ನೀರು ಸರಬರಾಜು ಮತ್ತು ಒಳಚರಂಡಿ ಕಾರ್ಯ ಗತಗೊಳಿಸಲು ಯೋಜನಾ ಪ್ರಸ್ತಾವನೆಗಳನ್ನು ಅಭಿವೃದ್ಧಿಪಡಿಸಲು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ನಿರ್ದೇಶನ ನೀಡಿತ್ತು. ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರು ಕಿರ್ಲೋಸ್ಕರ್ ಸಲಹಾ ಸಂಸ್ಥೆ ಮತ್ತು ಜಲ ಮತ್ತು ವಿದ್ಯುತ್ ಸಲಹಾ ಸಂಸ್ಥೆಗಳ ಸಹಾಯದೊಂದಿಗೆ ಒಂದು ಸವಿವರ ಯೋಜನಾ ವರದಿಯನ್ನು ತಯಾರಿಸಿತ್ತು. ಆದರೆ, ಹಣಕಾಸಿನ ಕೊರತೆಯಿಂದಾಗಿ ಯೋಜನೆಯನ್ನು ಕಾರ್ಯಗತಗೊಳಿಸಲು ಸಾಧ್ಯವಾಗಲಿಲ್ಲ.

2. ತಮಿಳುನಾಡಿನಲ್ಲಿ ಮಾರುಕಟ್ಟೆ ಸಾಲಗಳನ್ನು ಆಧರಿಸಿ ಪುರಸಭಾ ಸಮೂಹಗಳಿಗೆ ಶೇಖರಿಸಿದ ಹಣಕಾಸಿನ ಮಾದರಿಯೊಂದನ್ನು ಅಭಿವೃದ್ಧಿಪಡಿಸಿದಂತಹ INDO-US AID ನೆರವಿನ Financial Institution Reform and Expansion(FIRE) Project ಅವರ ಸಹಕಾರದೊಂದಿಗೆ ಅದೇ ತರಹದ ಒಂದು ಮಾದರಿಯನ್ನು ಈ ಯೋಜನೆಗಾಗಿ ಅಭಿವೃದ್ಧಿಪಡಿಸಲಾಗಿದೆ. ಸದರಿ FIRE Project, KUIDFC, BWSSB, ಪೌರಾಡಳಿತ ನಿರ್ದೇಶನಾಲಯ ಮತ್ತು ನಗರಾಭಿವೃದ್ಧಿ ಇಲಾಖೆಗಳ ಸಹಯೋಗದೊಂದಿಗೆ ಯೋಜನೆ ರೂಪರೇಷಗಳನ್ನು ಒಳಗೊಂಡ ಯೋಜನಾ ಅಭಿವೃದ್ಧಿ ವರದಿಯನ್ನು ತಯಾರಿಸಿದೆ. ಅಲ್ಲದೆ, FIRE ಅವರು Credit Rating Agencyಗಳಲ್ಲಿ ಒಬ್ಬರಾದ ICRA ಅವರನ್ನು ನೇಮಿಸಿದ್ದು, ಪ್ರಸ್ತಾಪಿತ ಯೋಜನೆಯ ಸೂಚಕ ಸಾಲಗಳ ಕುರಿತು ವಿಮರ್ಶೆ ಮಾಡಿಸಲಾಗಿದೆ.

3. FIRE Project ಅವರು ತಯಾರಿಸಿರುವ ಯೋಜನೆ ನೀರು ಸರಬರಾಜು ಮತ್ತು ಒಳಚರಂಡಿ ಸೌಲಭ್ಯಗಳನ್ನು ಒದಗಿಸುವ ಅಂಶಗಳನ್ನು ಒಳಗೊಂಡಿರುತ್ತದೆ. ಒಳಚರಂಡಿ ವ್ಯವಸ್ಥೆಯನ್ನು ನೀರು ಸರಬರಾಜು ವ್ಯವಸ್ಥೆಯಿಂದ ಬೇರ್ಪಡಿಸಿದ್ದಲ್ಲಿ ಬೆಂಗಳೂರು ನಗರದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನೀರು ಕಲುಷಿತಗೊಳ್ಳುತ್ತದೆ ಎಂದು ಕಂಡು ಬಂದುದರಿಂದ ನೀರು ಸರಬರಾಜು ಯೋಜನೆ ಜೊತೆಯಲ್ಲಿ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಯೋಜನೆಯನ್ನು ಅನುಷ್ಠಾನ ಗೊಳಿಸಲು ಪ್ರಸ್ತಾಪಿಸಲಾಗಿದೆ.

I. **ಯೋಜನಾ ವಿವರಗಳು:-**

**ಎ. ಯೋಜನಾ ಅನುಷ್ಠಾನ ಹಾಗೂ ಮೇಲ್ವಿಚಾರಣೆ :**

4 ಶಾಸನದ ಮೇರೆಗೆ ಈ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಒಳಗೊಂಡ ಪ್ರದೇಶಗಳು ಬೆಂಗಳೂರು ಜಲಮಂಡಳಿಯ ವ್ಯಾಪ್ತಿಯಲ್ಲಿ ಬರುತ್ತವೆ. ಆದ್ದರಿಂದ, ಈ ಯೋಜನೆಯನ್ನು ಬೆಂಗಳೂರು ಜಲಮಂಡಳಿಯಿಂದ

ಅನುಷ್ಠಾನಗೊಳಿಸಲ್ಪಡುವುದು. ಬೆಂಗಳೂರು ಜಲಮಂಡಳಿಯು ಅವಶ್ಯಕತೆಯನ್ನು ಅನುಸರಿಸಿ ಅಗತ್ಯ ನೀರಿನ ಮೂಲ ಹಾಗೂ ಸಾಮರ್ಥ್ಯವನ್ನು ಹಂಚಿಕೆ ಮಾಡುತ್ತದೆ. ವಿನ್ಯಾಸದ ಮಾರ್ಪಾಡುಗಳ ಅನುಸಾರವಾಗಿ ಯೋಜನಾ ನಗರದೊಳಗೆ ನೀರು ಹಾಗೂ ಒಳಚರಂಡಿ ವ್ಯವಸ್ಥೆಯನ್ನು ಒದಗಿಸುವುದು. ನಗರ ಸ್ಥಳೀಯ ಸಂಸ್ಥೆಗಳ ಯೋಜನಾ ವ್ಯಾಪ್ತಿಯಲ್ಲಿ ಸಮಗ್ರ ಜಾಲವನ್ನು ನಿರ್ವಹಿಸುತ್ತಿದೆ. ಗ್ರಾಹಕರಿಗೆ ನೀರು ಮತ್ತು ಒಳಚರಂಡಿ ಸೇವೆಗಳನ್ನು ನೇರವಾಗಿ ಅಥವಾ ಪಿಎಸ್‌ಪಿ ಆಧಾರಿತ ನಿಯೋಜಿತ ವ್ಯವಸ್ಥಾಪಕ ವ್ಯವಸ್ಥೆಗಳ ಮೂಲಕ ಒದಗಿಸುವುದು. ಅಲ್ಲದೆ, ತೆರಿಗೆ ವಿಧಿಸುವುದು ಹಾಗೂ ರಾಜಸ್ವವನ್ನು ನೇರವಾಗಿ ಸಂಗ್ರಹಿಸುವುದು. ನಗರದ ಬಡ ಜನರಿಗೆ ಪ್ರತಿ ಮನೆ ಸಂಪರ್ಕಕ್ಕೆ ಬೆಂಗಳೂರು ಜಲಮಂಡಳಿಯು ಆಗಾಗ ನಿಗದಿಪಡಿಸಿದ ಕಡಿಮೆ ದರದಲ್ಲಿ ಈ ಸೇವೆಯನ್ನು ಒದಗಿಸುವುದು. ಹೊಸ ನೀರು ಹಂಚಿಕೆ ಪದ್ಧತಿಯಿಂದ ಆಗುವ ಪ್ರಯೋಜನಗಳನ್ನು ಗಮನದಲ್ಲಿಟ್ಟುಕೊಂಡು ಈ ನಗರ ಸ್ಥಳೀಯ ಸಂಸ್ಥೆಗಳಿಗೆ ನಿರಂತರ ನೀರು ಸರಬರಾಜಿನ ಒಂದು ಕಾರ್ಯತಂತ್ರವನ್ನು ಸಹಾ ಈ ಯೋಜನೆಯಲ್ಲಿ ಪರ್ಯಾಲೋಚಿಸಲಾಗಿದೆ.

5. ಬೆಂಗಳೂರು ಜಲಮಂಡಳಿಯು ಈ ಕೆಳಕಂಡ ರೀತಿಯಲ್ಲಿ ಯೋಜನೆಯನ್ನು ಕೈಗೆತ್ತಿಗೊಳ್ಳುವುದು:-

i) ಸರ್ಕಾರದ ನಿರ್ದೇಶನಗಳನ್ನು ಆಧರಿಸಿ ಮತ್ತು ಲಭ್ಯವಾಗುವ ಹಣಕಾಸಿನ ಮೂಲವನ್ನು ಅವಲಂಬಿಸಿ ನೀರು ಪೂರೈಕೆ ಮತ್ತು ಒಳಚರಂಡಿ ಯೋಜನೆಗಳನ್ನು ಹಂತ ಹಂತವಾಗಿ ಇಲ್ಲವೇ ಒಟ್ಟಿಗೆ ಅನುಷ್ಠಾನ ಗೊಳಿಸಲಾಗುವುದು.

ii) ಸತತವಾಗಿ ನೀರು ಪೂರೈಕೆ ಪರಿಗಣನೆಯೊಂದಿಗೆ ಬೆಂಗಳೂರು ನಗರ ಮತ್ತು ಈ 8 ನಗರಸಭೆಗಳಲ್ಲಿ ನೀರು ಪೂರೈಕೆಯನ್ನು ಸಮಾನಂತರ ಆಧರಿಸಿ ನಿರ್ವಹಿಸಲಾಗುವುದು.

iii) ಬೆಂಗಳೂರು ಜಲಮಂಡಳಿಯು ತನ್ನ ವೆಚ್ಚದಲ್ಲಿ ಗೃಹೇತರ ಹಾಗೂ ಕೈಗಾರಿಕಾ ಬಳಕೆದಾರರಿಗೆ ಅವರುಗಳ ಅವಶ್ಯಕತೆಯನ್ನು ಅನುಸರಿಸಿ ಯೋಜನಾ ಪ್ರದೇಶಗಳನ್ನು ನೀರು ಸರಬರಾಜು ಪೂರಕ ಕೊಳವೆಗಳನ್ನು ನೇರವಾಗಿ ಅಳವಡಿಸುತ್ತದೆ.

iv) ಯಾವುದೇ ಮೂಲ ಅಥವಾ ತನ್ನ ಎಲ್ಲ ಮೂಲಗಳ ಮೂಲಕ ನೀರು ಪೂರೈಕೆ ಮಾಡಲು ಬೆಂಗಳೂರು ಜಲಮಂಡಳಿಯು ಸ್ವತಂತ್ರ ಹೊಂದಿರುತ್ತದೆ.

v) ಯೋಜನಾ ಪ್ರದೇಶಗಳಲ್ಲಿ ನೀರು ಪೂರೈಕೆ ಕೊಳವೆಗಳನ್ನು, ಯುಜಿಡಿ ಲೈನ್‌ಗಳನ್ನು ಹಾಕಿದ ನಂತರ ಮತ್ತು ಮನೆಗಳಿಗೆ ಸಂಪರ್ಕ ಕಲ್ಪಿಸಿದ ನಂತರವೇ ಸ್ಥಳೀಯ ನಗರ ಸಂಸ್ಥೆಗಳು ರಸ್ತೆಗಳ ಯಥಾ ಸ್ಥಾಪನೆ ಕಾರ್ಯವನ್ನು ಕೈಗೆತ್ತಿಗೊಳ್ಳುವವು.

vi) ಯೋಜನಾ ಅನುಷ್ಠಾನಕ್ಕಾಗಿ ಬೆಂಗಳೂರು ಜಲಮಂಡಳಿಯು ಅಧೀಕ್ಷಕ ಅಭಿಯಂತರರ ಮಟ್ಟದ ಇಬ್ಬರು ಇಂಜಿನಿಯರ್‌ಗಳನ್ನು ನೇಮಕ ಮಾಡಿಕೊಳ್ಳಬಹುದಾಗಿದೆ ಹಾಗೂ ಈ ಹುದ್ದೆಗಳು ಈ ಯೋಜನೆಯ ಅನುಷ್ಠಾನದ ಮುಕ್ತಾಯದೊಂದಿಗೆ ಕೊನೆಗೊಳ್ಳುವವು.

6. ಯೋಜನಾ ನಿರ್ವಹಣಾ ಘಟಕವನ್ನು(ಪಿಎಂಯು) ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿ ಸ್ಥಾಪಿಸಲಾಗುವುದು. ನಿರ್ಮಾಣದ ವಿನ್ಯಾಸ ಹಾಗೂ ಉಸ್ತುವಾರಿಯನ್ನು ಮಾಡಲು ಯೋಜನಾ ನಿರ್ವಹಣಾ ಸಲಹೆ ಗಾರರನ್ನು(ಪಿಎಂಸಿ) ಬೆಂಗಳೂರು ಜಲಮಂಡಳಿಯು ನೇಮಕ ಮಾಡುವುದು. ಯೋಜನಾ ಸಂಬಂಧದಲ್ಲಿ ಮಾರ್ಗದರ್ಶನ ನೀಡಲು ಮತ್ತು ಯೋಜನೆಯ ಮೇಲ್ವಿಚಾರಣೆ ನಡೆಸಲು ಪ್ರಧಾನಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಯೋಜನಾ ಚಾಲನಾ ಸಮಿತಿಯನ್ನು ರಚಿಸಲಾಗುವುದು. ಯೋಜನಾ ಚಾಲನಾ ಸಮಿತಿಯ ರಚನೆಯು ಈ ಕೆಳಕಂಡಂತೆ ಇರುತ್ತದೆ. ಕಾಲಕಾಲಕ್ಕೆ ಅವಶ್ಯಕವಿರುವ ಯೋಜನೆಗೆ ಸಂಬಂಧಿಸಿದ ನಿರ್ಧಾರಗಳನ್ನು ಕೈಗೊಳ್ಳಲು ಯೋಜನಾ ಚಾಲನಾ ಸಮಿತಿಗೆ ಅಧಿಕಾರ ಹೊಂದಿರುತ್ತದೆ.

**ಯೋಜನಾ ಚಾಲನಾ ಸಮಿತಿ:-**

| | | |
|---|---|---|
| 1) | ಸರ್ಕಾರದ ಪ್ರಧಾನಕಾರ್ಯದರ್ಶಿಯವರು, ನಗರಾಭಿವೃದ್ಧಿ ಇಲಾಖೆ | ಅಧ್ಯಕ್ಷರು. |
| 2) | ಸರ್ಕಾರದ ಕಾರ್ಯದರ್ಶಿಯವರು, ನಗರಾಭಿವೃದ್ಧಿ ಇಲಾಖೆ | ಸದಸ್ಯರು. |
| 3) | ಸರ್ಕಾರದ ಕಾರ್ಯದರ್ಶಿಯವರು, ಹಣಕಾಸು ಇಲಾಖೆ | ಸದಸ್ಯರು. |
| 4) | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ಮೂಲಭೂತ ಅಭಿವೃದ್ಧಿ ಮತ್ತು ಹಣಕಾಸು ನಿಗಮ | ಸದಸ್ಯರು. |
| 5) | ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ | ಸದಸ್ಯರು. |
| 6) | ಅಧ್ಯಕ್ಷರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ | ಸದಸ್ಯರು. |
| 7) | ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಗಳು | ಸದಸ್ಯರು. |
| 8) | ಯುಎಸ್‌ಎಐಡಿ/ಎಫ್‌ಐಪಿಇ ಯೋಜನೆಯ ಪ್ರತಿನಿಧಿ | ಸದಸ್ಯರು. |

7. ತಾಂತ್ರಿಕ ಪರಿಗಣನೆಗಳು ಮತ್ತು ಲಭ್ಯವಿರುವ ಹಣಕಾಸಿನ ಮೂಲಗಳನ್ನು ಆಧಾರಿಸಿ ಹಂತಹಂತವಾಗಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು. ಬಾಹ್ಯ ಏಜೆನ್ಸಿ ಮೂಲಕ ನೆರವು ಮಂಜೂರಾದ ನಂತರವೇ ಒಳಚರಂಡಿ ಯೋಜನೆ ಅನುಷ್ಠಾನಗೊಳಿಸಲಾಗುವುದು. ತದನಂತರ ಬೆಂಗಳೂರು ಜಲಮಂಡಳಿಯು ಟೆಂಡರ್‌ಗಳನ್ನು ಆಹ್ವಾನಿಸುವುದು. ಯೋಜನಾ ಚಾಲನಾ ಸಮಿತಿಯು ಯೋಜನಾ ಅನುಕ್ರಮವನ್ನು ನಿರ್ಧರಿಸುವುದು. ಸದ್ಯದ ನಿರೀಕ್ಷೆಯಂತೆ ನೀರು ಪೂರೈಕೆ ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು.

**ಬಿ. ಯೋಜನಾ ವೆಚ್ಚದ ಅಂದಾಜುಗಳು:-**

8. ಯೋಜನಾ ವೆಚ್ಚದ ಅಂದಾಜುಗಳ (ರೂಪಾಯಿ ಕೋಟಿಗಳಲ್ಲಿ) ಸಾರಾಂಶ ಈ ಕೆಳಕಂಡಂತಿದೆ. ಅನುಬಂಧ-1 ದಲ್ಲಿ ನೀರು ಪೂರೈಕೆ ಹಾಗೂ ಒಳಚರಂಡಿ ಕುರಿತಂತೆ ನಗರ ಸ್ಥಳೀಯ ಸಂಸ್ಥೆವಾರು ಯೋಜನಾ ವೆಚ್ಚದ ವಿವರಗಳನ್ನು ಪ್ರತ್ಯೇಕವಾಗಿ ನೀಡಲಾಗಿದೆ:-

| | ಬಾಬ್ತು | ನೀರು ಸರಬರಾಜು | ಒಳಚರಂಡಿ | ಒಟ್ಟು |
|---|---|---|---|---|
| ಎ | 2001-02 ರ ಬೆಲೆಗಳಲ್ಲಿ WAPCO ರೀತ್ಯ ಮೂಲವೆಚ್ಚ | 232.07 | 215.68 | 447.75 |
| ಬಿ | 2001-02ರ ಪರಿಷ್ಕೃತ ವಿನ್ಯಾಸದಂತೆ ಮೂಲವೆಚ್ಚ | 234.92 | 215.68 | 450.59 |
| ಸಿ | ನಿರ್ಮಾಣದ ಹಂತದಲ್ಲಿ ಬೆಲೆ ಏರಿಕೆ, ಸಾದಿಲ್ವಾರು ವೆಚ್ಚಗಳು, ಮೇಲ್ವಿಚಾರಣಾ ವೆಚ್ಚ ಹಾಗೂ ಬಡ್ಡಿ ಸೇರಿದಂತೆ ಒಟ್ಟು ವೆಚ್ಚ | 340.55 | 318.09 | 658.64 |

**ಸಿ. ಯೋಜನಾ ಆರ್ಥಿಕ ವಿನ್ಯಾಸ:-**

9. ನಗರ ನೀರು ಸರಬರಾಜು ಯೋಜನೆಗಳಿಗೆ ಹಣಕಾಸು ನೆರವು ಕುರಿತ 1996ರ ರಾಜ್ಯ ಸರ್ಕಾರದ ನೀತಿಯ(ಸರ್ಕಾರದ ಆದೇಶ ಸಂಖ್ಯೆ.ಯುಡಿಡಿ 204 ಯುಎಂಎಸ್ 95, ದಿನಾಂಕ.15-11-1996)ರ ಪ್ರಕಾರ 75,000ಕ್ಕಿಂತಲೂ ಹೆಚ್ಚು ಜನಸಂಖ್ಯೆ ಇರುವ ನಗರಗಳು ಶೇಕಡ.23.3ರಷ್ಟು ಅನುದಾನಕ್ಕೆ ಅರ್ಹರಾಗುತ್ತವೆ. ಉಳಿದ ಸಂಪನ್ಮೂಲಗಳನ್ನು, ಶೇ.10ರಷ್ಟು ನಗರ ಸ್ಥಳೀಯ ಸಂಸ್ಥೆಗಳ ವಂತಿಕೆ ಮತ್ತು ಶೇ.66.7ರಷ್ಟು ಸಾಲದ ಮೂಲಕ ಸಂಗ್ರಹಿಸಲು ನಿರೀಕ್ಷಿಸಲಾಗಿದೆ. ಒಳಚರಂಡಿ ಘಟಕಕ್ಕೆ ಹಣಕಾಸು ನೆರವನ್ನು ಜಪಾನ್ ಅಂತರರಾಷ್ಟ್ರೀಯ ಸಹಕಾರ ಬ್ಯಾಂಕ್ ಮತ್ತು ಏಷ್ಯಾ ಅಭಿವೃದ್ಧಿ ಬ್ಯಾಂಕ್‌ರಂತಹ ಬಾಹ್ಯ ಏಜೆನ್ಸಿಗಳ ಮೂಲಕ ಪಡೆಯಲು ಉದ್ದೇಶಿಸಲಾಗಿದೆ. ಕೇಂದ್ರ ಸರ್ಕಾರದ ಹೆಚ್ಚುವರಿ ಕೇಂದ್ರ ಯೋಜನೆ ಅಡಿಯಲ್ಲಿ ಬಾಹ್ಯ ನೆರವಿನ ಶೇ.30ರಷ್ಟು ಅನುದಾನ ರೂಪದಲ್ಲಿ ಹಾಗೂ ಶೇ.70 ರಷ್ಟು ರಾಜ್ಯ ಸರ್ಕಾರಕ್ಕೆ ಸಾಲದ ರೂಪದಲ್ಲಿ ದೊರೆಯುವುದು. ಭಾಗಶ: ನಿಧಿ ಒದಗಿಸುವ ಕುರಿತು ಜಪಾನ್ ಅಂತರರಾಷ್ಟ್ರೀಯ ಸಹಕಾರ ಬ್ಯಾಂಕ್‌ನೊಂದಿಗೆ ಪ್ರಸ್ತುತ ಚರ್ಚೆಗಳು ನಡೆಯುತ್ತಿವೆ. ರಾಜ್ಯದ ಮೇಲೆ ಹಾಗೂ ಭಾಗವಹಿಸುವ ನಗರ ಸ್ಥಳೀಯ ಸಂಸ್ಥೆಗಳ ಮೇಲೆ ಬೀಳುವ ಸಾಲದ ಹೊರೆಯನ್ನು ಕಡಿಮೆ ಮಾಡುವ ದೃಷ್ಠಿಯಿಂದ ಯೋಜನೆಗೆ ಒಂದು ಬಾರಿಯ ಬಂಡವಾಳ ವೆಚ್ಚ ಕೊಡುಗೆಯ ವ್ಯವಸ್ಥೆಯನ್ನು ಅಳವಡಿಸಲಾಗಿದೆ. ಈ ವ್ಯವಸ್ಥೆಯನ್ನು ಜಾರಿಗೆ ತರುವುದರಿಂದ ಯೋಜನೆಯ ಸಾಮರ್ಥ್ಯ ಹೆಚ್ಚಾಗುತ್ತದೆಯಲ್ಲದೆ ನಾಗರೀಕರಲ್ಲಿ ಮಾಲೀಕತ್ವದ ಭಾವನೆಯನ್ನು ಉಂಟು ಮಾಡಲು ಸಹಾಯ ಮಾಡುತ್ತದೆ. ಪ್ರತಿ ಆಸ್ತಿ ಮೇಲಿನ ಪ್ರಸ್ತಾಪಿತ ಬಂಡವಾಳ ಹೂಡಿಕೆಯು ಭಾಗವಹಿಸುತ್ತಿರುವ ಪಟ್ಟಣಗಳ ಪ್ರತಿಯೊಬ್ಬ ವಸತಿದಾರನು ಭರಿಸುತ್ತಿರುವ ನೀರು ಪೂರೈಕೆ ಹಾಗೂ ಒಳಚರಂಡಿ ಹಾಲಿ ವೆಚ್ಚಕ್ಕಿಂತ ಕಡಿಮೆಯಾಗಿರುತ್ತದೆ. ಯೋಜನೆ ಹಣಕಾಸು ನೆರವಿನ ಸ್ವರೂಪ ಈ ಕೆಳಕಂಡಂತೆ ಇದೆ. ಯೋಜನಾ ನಗರಗಳಿಗೆ ಸಂಬಂಧಿಸಿದ ಹಣಕಾಸಿನ ವಿವರಗಳನ್ನು ಅನುಬಂಧ-1ರಲ್ಲಿ ತೋರಿಸಲಾಗಿದೆ.

| ಬಾಬ್ತು | ರೂಪಾಯಿ ಕೋಟಿಗಳಲ್ಲಿ |
|---|---|
| ಒಟ್ಟು ಯೋಜನಾ ವೆಚ್ಚ | 658.65 |
| ಹಣಕಾಸು ನೆರವು | |
| ಎ. ಬಳಕೆದಾರರ ವಂತಿಕೆ | 119.44 |
| ಬಿ. ನೀರು ಸರಬರಾಜು ಬಾಬ್ತಿಗೆ ರಾಜ್ಯದಅನುದಾನಗಳು | 74.28 |
| ಸಿ. ಕೇಂದ್ರ ಸರ್ಕಾರದ ಹೆಚ್ಚುವರಿ ಕೇಂದ್ರ ಯೋಜನೆ ಅಡಿ ಒಳಚರಂಡಿ ಯೋಜನೆಗೆ ಅನುದಾನ | 89.10 |
| ಡಿ. ನಗರ ಸ್ಥಳೀಯ ಸಂಸ್ಥೆಗಳು ಸಾಲ ಪಡೆಯುವುದು | |
| ಮಾರುಕಟ್ಟೆ ಸಾಲ | 100.00 |
| ಬೃಹನ್ನಗರ ಸಾಲ | 46.82 |
| ಇ. ಬಾಹ್ಯ ಏಜೆನ್ಸಿಗಳಿಂದ ಒಳಚರಂಡಿ ಯೋಜನೆ ಸಾಲ | 229.01 |
| ಒಟ್ಟು | 658.66 |

ಎ) ಒಂದು ಬಾರಿಯ ಬಳಕೆದಾರರ ಸಂಪರ್ಕ ವೆಚ್ಚಗಳ ಮೂಲಕ ನಗರ ಸ್ಥಳೀಯ ಸಂಸ್ಥೆಗಳ ವಂತಿಕೆ: ಯೋಜನೆಯಲ್ಲಿ ಭಾಗವಹಿಸುವ ನಗರ ಸ್ಥಳೀಯ ಸಂಸ್ಥೆಗಳು ಎಲ್ಲಾ ಗೃಹ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.8500/-ಗಳಂತೆ ಮತ್ತು ಗೃಹೇತರ ಬಳಕೆದಾರರಿಂದ ಪ್ರತಿ ಸ್ವತ್ತಿಗೆ 17,000 ರೂಪಾಯಿಗಳಂತೆ ಒಂದು ಬಾರಿಯ ಬಂಡವಾಳ ವಂತಿಕೆಯನ್ನು ಸಂಗ್ರಹಿಸುತ್ತದೆ. ಈ ವೆಚ್ಚವು ಬೆಂಗಳೂರು ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ವಿಧಿಸುವ ಮಾರ್ಗ ಮತ್ತು ಸಂಪರ್ಕ ವೆಚ್ಚಗಳು ಹಾಗೂ ಸ್ವತ್ತಿನ ಮಾಲೀಕರು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂದಾಯ ಮಾಡಬೇಕಾದ ರಸ್ತೆ ಅಗೆಯುವ ವೆಚ್ಚಗಳ ಹೊರತಾಗಿರುತ್ತವೆ. ಸ್ವತ್ತಿನ ಮಾಲೀಕರು ಶೇ.50ರಷ್ಟು ಸಂದಾಯ ಮಾಡಿದರು ರೂ.119.4 ಕೋಟಿ ಈ ಮೂಲದಿಂದ ದೊರೆಯುತ್ತದೆಂದು ನಿರೀಕ್ಷಿಸಲಾಗಿದೆ. ಒಂದು ಬಾರಿಯ ವಂತಿಕೆಯನ್ನು ಸಂಗ್ರಹಿಸುವುದಕ್ಕಾಗಿ ತೀವ್ರ ಮತ್ತು ಸ್ಥಿರವಾದ ಸಾರ್ವಜನಿಕರ ಪ್ರಚಾರ ಆಂದೋಲನವನ್ನು ಹಮ್ಮಿಕೊಳ್ಳುವುದು ಅವಶ್ಯ.

**ಬಿ) ರಾಜ್ಯ ಅನುದಾನ:** ಮೇಲ್ಕಂಡ 1996ರ ಸರ್ಕಾರದ ಆದೇಶದನ್ವಯ ರಾಜ್ಯದ ಅನುದಾನ ರೂ.74.28 ಕೋಟಿ ಬೇಕಾಗಿರುತ್ತದೆ.

**ಸಿ) ಬಾಹ್ಯ ನೆರವಿನ ಯೋಜನೆಯ ಅಡಿಯಲ್ಲಿ ಹೆಚ್ಚುವರಿ ಕೇಂದ್ರದ ಯೋಜನೆಯ ಅಡಿಯಲ್ಲಿ ಅನುದಾನ:** ಈ ಯೋಜನೆಯ ಅಡಿಯಲ್ಲಿ ಬಾಹ್ಯ ನೆರವಿನ ಶೇ.30ರಷ್ಟು ಅನುದಾನಕ್ಕೆ ರಾಜ್ಯ ಸರ್ಕಾರವು ಅರ್ಹರಿರುತ್ತದೆ. ಈ ಯೋಜನೆಯ ಅಡಿ ರೂ.89.1 ಕೋಟಿ ಬರುವುದೆಂದು ಅಂದಾಜು ಮಾಡಲಾಗಿದೆ.

**ಡಿ) ನಗರ ಸ್ಥಳೀಯ ಸಂಸ್ಥೆಗಳು ಪಡೆಯುವ ಸಾಲ:** ಈ ಯೋಜನೆಯ ಅಡಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳು ಪಡೆಯಬೇಕಾದ ಸಾಲ 146.82 ಕೋಟಿ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಆದರೆ, 1996ರ ಸರ್ಕಾರದ ಆದೇಶದ ಪ್ರಕಾರ ಶೇ.50ರಷ್ಟು ಅನುದಾನ ದೊರಕುವುದರಿಂದ ಕೆಂಗೇರಿ ಯೋಜನೆಗೆ ಸಾಲ ಪಡೆಯುವ ಅಗತ್ಯವಿರುವುದಿಲ್ಲ.

**ನಗರ ಸ್ಥಳೀಯ ಸಂಸ್ಥೆಗಳು ಮಾರುಕಟ್ಟೆಯಿಂದ ಎತ್ತುವ ಸಾಲದ:** ಈ ಮುಂದಿನ ಪ್ಯಾರಗಳಲ್ಲಿ ವಿವರಿಸಲಾಗಿರುವ ಸಾಲವರ್ಧನೆ ವ್ಯವಸ್ಥೆಯೊಂದಿಗೆ ಸಂಚಿತ ಹಣಕಾಸು ಚೌಕಟ್ಟಿನ ಮೇರೆಗೆ ಕರ್ನಾಟಕ ಸರ್ಕಾರದ ಖಾತರಿ ಇಲ್ಲದೆ 100.00 ಕೋಟಿ ರೂಪಾಯಿಗಳ ಮೊಬಲಗನ್ನು ಎತ್ತಲು ಉದ್ದೇಶಿಸಲಾಗಿದೆ. ಈ ರೀತಿ ಮಾರುಕಟ್ಟೆಯಿಂದ ಪಡೆದ ಸಾಲದ ಮರುಪಾವತಿ ನಗರ ಸ್ಥಳೀಯ ಸಂಸ್ಥೆಗಳು ಪ್ರಸ್ತುತ ಇರುವ ಮತ್ತು ಮುಂದೆ ಪಡೆಯುವ ಇತರೆ ಯಾವುದೇ ಸಾಲಗಳ ಮರು ಪಾವತಿಕ್ಕಿಂತ ಹೆಚ್ಚಿನ ಆದ್ಯತೆ ಪಡೆಯುತ್ತದೆ.

**ನಗರ ಸ್ಥಳೀಯ ಸಂಸ್ಥೆಗಳಿಗೆ ಬೃಹನ್ನಗರ ಸಾಲ:** ಉಳಿದ 46.82 ಕೋಟಿ ರೂಪಾಯಿಗಳ ಸಾಲಕ್ಕೆ ಸಾಲ ಮಂಜೂರಾತಿ ಮಾಡುವಂತೆ ಬೃಹನ್ನಗರ ಮಂಜೂರಾತಿ ಸಮಿತಿಯನ್ನು ಕೋರಲಾಗುವುದು. ಯೋಜನಾ ನಗರ ಸ್ಥಳೀಯ ಸಂಸ್ಥೆಗಳು ಬೆಂಗಳೂರು ಮಹಾನಗರ ಪ್ರದೇಶಗಳೊಳಗೆ ಬರುವುದರಿಂದ ಅವು ಬೃಹನ್ನಗರ ನಿಧಿ ಪಡೆಯುವುದಕ್ಕೆ ಅರ್ಹವಾಗಿವೆ.

**ಈ) ಬಾಹ್ಯ ನೆರವಿನ ಯೋಜನೆಯ ಅಡಿಯಲ್ಲಿ ಕರ್ನಾಟಕವು ಪಡೆಯುವ ಸಾಲ:** ಪ್ರಮುಖವಾಗಿ ಒಳಚರಂಡಿ ಯೋಜನೆಗಾಗಿ ಬಾಹ್ಯ ಏಜೆನ್ಸಿಯಿಂದ ರೂ.318.00 ಕೋಟಿ(ರೂ.229 ಕೋಟಿ ಸಾಲ ಹಾಗೂ 89 ಕೋಟಿ ಹೆಚ್ಚುವರಿ ಕೇಂದ್ರ ಯೋಜನೆ ಅಡಿ) ಸಾಲ ಪಡೆಯಲು ಪ್ರಸ್ತಾಪಿಸಲಾಗಿದೆ.

ಎಫ್) ಟೆಂಡರ್ ವೆಚ್ಚ ಮತ್ತು ಬಂಡವಾಳ ಕೊಡುಗೆಗಳ ಸಾಧನೆಯನ್ನು ಆಧರಿಸಿ ನಿರ್ಮಾಣ ಹಂತದಲ್ಲಿ ಸಾಲದ ಸಂಗ್ರಹಣೆಯನ್ನು ಹೆಚ್ಚಿಸುವುದು ಮತ್ತು/ಅಥವಾ ಕಡಿಮೆ ಮಾಡುವುದು ಅವಶ್ಯ.

**III. ಬಾಂಡ್ ನೀಡುವುದರ ಮೂಲಕ ಮಾರುಕಟ್ಟೆಯ ಸಾಲಗಳ ಮೂಲಗಳು:**

10. ಬಂಡವಾಳದಾರರಿಂದ ಬಾಂಡ್ ವಿತರಣೆ ಮೂಲಕ ಸಾಲ ಎತ್ತಲು ಸಂಚಿತ ಹಣಕಾಸಿನ ಯಾಂತ್ರಿಕ ಕೌಶಲ್ಯವನ್ನು ಅಳವಡಿಸಿಕೊಳ್ಳಲಾಗುವುದು. ಭಾಗವಹಿಸುತ್ತಿರುವ ನಗರ ಸ್ಥಳೀಯ ಸಂಸ್ಥೆಗಳ ಪರವಾಗಿ ಬಾಂಡ್ ವಿತರಣೆ ಮಾಡುವುದರೊಂದಿಗೆ ಮಾರುಕಟ್ಟೆ ಬಂಡವಾಳ ಹೊಂದಲು 1982ರ ಇಂಡಿಯನ್ ಟ್ರಸ್ಟ್ ಕಾಯ್ದೆ ಅಡಿಯಲ್ಲಿ **"ಕರ್ನಾಟಕ ನೀರು ಮತ್ತು ಒಳಚರಂಡಿ ಸಂಚಿತ ನಿಧಿ (KWSPF)"** ಎಂಬ ಸಾಲ ನಿಧಿಯೊಂದನ್ನು ಸ್ಥಾಪಿಸಲಾಗುವುದು. ಮೇಲ್ಕಂಡ ಸಾಲ ನಿಧಿಯು ಮಾರುಕಟ್ಟೆಯಿಂದ ಸಾಲ ಪಡೆದು ತಾನೇ ನಿರ್ಧರಿಸಿದ ನಿಬಂಧನೆಗೊಳಪಟ್ಟು ಮರು ಸಾಲವನ್ನು ನಗರ ಸ್ಥಳೀಯ ಸಂಸ್ಥೆಗಳಿಗೆ ನೀಡುವುದು. KWSPF ಟ್ರಸ್ಟ್ ನಿರ್ವಹಣೆಗಾಗಿ ಸ್ವತ್ತು ನಿರ್ವಹಣಾ ಸಂಸ್ಥೆಯಾಗಿ KUIDFC ಇರುತ್ತದೆ. ರೂ.10,000 ಪ್ರಾರಂಭಿಕ ಕೊಡುಗೆಯೊಂದಿಗೆ KWSPF ಸ್ಥಾಪಿಸಲಾಗುವುದು. ಈ ಕೆಳಕಂಡ ಅಧಿಕಾರಿಗಳು KWSPFದ ಟ್ರಸ್ಟಿಗಳಾಗಿರುತ್ತಾರೆ.

| | | |
|---|---|---|
| 1. | ಪ್ರಧಾನಕಾರ್ಯದರ್ಶಿಯವರು,ನಗರಾಭಿವೃದ್ಧಿ ಇಲಾಖೆ | ಅಧ್ಯಕ್ಷರು |
| 2. | ಪ್ರಧಾನಕಾರ್ಯದರ್ಶಿಯವರು,ಆರ್ಥಿಕ ಇಲಾಖೆ | ಸದಸ್ಯರು |
| 3. | ಕಾರ್ಯದರ್ಶಿಯವರು(ಎ ಮತ್ತು ಯುಡಿಎ), ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| 4. | ನಿರ್ದೇಶಕರು,ಪೌರಾಡಳಿತ ನಿರ್ದೇಶನಾಲಯ | ಸದಸ್ಯರು |
| 5. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ಮೂಲಭೂತ ಅಭಿವೃದ್ಧಿ ಮತ್ತು ಹಣಕಾಸು ನಿಗಮ | ಸದಸ್ಯ ಕಾರ್ಯದರ್ಶಿ |

**IV. ಮಾರುಕಟ್ಟೆಯಿಂದ ಸಾಲ ಪಡೆಯುವ ಉದ್ದೇಶಕ್ಕಾಗಿ ಭದ್ರತೆ ಮತ್ತು ಸಾಲವರ್ಧನೆ ಸ್ವರೂಪ:**

11. ಯೋಜನೆಗೆ ಕ್ರೋಢಿಕರಿಸಲಾಗುವ ಸಾಲಕ್ಕೆ ನೀಡಲಾಗುವ ಪ್ರಮುಖ ಭದ್ರತೆಯು ಒಬ್ಬ ನ್ಯಾಸಧಾರಿಯು (Trustee) ಮೇಲ್ವಿಚಾರಣೆ ನಡೆಸುವ ರಚನಾತ್ಮಾತಕ ಸಂದಾಯ ವ್ಯವಸ್ಥೆಯೊಂದಿಗೆ ನಗರ ಮಟ್ಟದಲ್ಲಿ ಜಲ ಯೋಜನೆಯ ಲೆಕ್ಕದಲ್ಲಿ(WPA) ಖಾತರಿಯಾಗಿಡುವ, ಭಾಗವಹಿಸುವ ನಗರ ಸ್ಥಳೀಯ ಸಂಸ್ಥೆಗಳ ಆದಾಯದ ಮೇಲಿನ ಛಾರ್ಜ್‌ಯಾಗಿ ರುತ್ತದೆ. ನಿರ್ದಿಷ್ಟವಾಗಿ ಈ ಮುಂದಿನ ಸ್ವರೂಪವನ್ನು ಪ್ರಸ್ತಾಪಿಸಲಾಗಿದೆ.

1. ಭಾಗವಹಿಸುವ ಪ್ರತಿಯೊಂದು ಸ್ಥಳೀಯ ಸಂಸ್ಥೆಯು ಒಂದು ಸಮರ್ಪಿತ ಜಲ ಯೋಜನಾ ಲೆಕ್ಕವನ್ನು(WPA) ನಿರ್ವಹಿಸುತ್ತದೆ. ಮಾರುಕಟ್ಟೆಯಿಂದ ಪಡೆದ ಸಾಲಗಳ ವಾರ್ಷಿಕ ಋಣ ತೀರಿಕೆ ಸಂದಾಯ ಗಳ 1.5ಕ್ಕೆ ಸಮನವಾದ ಮೊಬಲಗನ್ನು ನಗರ ಸ್ಥಳೀಯ ಸಂಸ್ಥೆಗಳ ಸಾಮಾನ್ಯ ಆದಾಯದಿಂದ(ಆಸ್ತಿ ತೆರಿಗೆ ಆದಾಯ, ಇತರ ಸ್ವಂತ ಸಂಪನ್ಮೂಲಗಳು ಮತ್ತು ಅವಶ್ಯವಿದ್ದಲ್ಲಿ ರಾಜ್ಯದಿಂದ ನಿಧಿ ವರ್ಗಾವಣೆ) ಮತ್ತು ಋಣ ತೀರಿಕೆಗಾಗಿ ರಾಜ್ಯ ಸರ್ಕಾರವು ನೀಡುವ ವಾರ್ಷಿಕ ಕಾರ್ಯಾಚರಣೆ ಅನುದಾನಗಳಿಂದ ಈ ಖಾತೆಗೆ ವರ್ಗಾಯಿಸಲಾಗುವುದು.
2. ಜಲ ಯೋಜನಾ ಲೆಕ್ಕದಿಂದ (WPA) ಸಂದಾಯ ಗಡುವು ದಿನಾಂಕಕ್ಕೆ ಮೊದಲು ಸಾಲ ಮರು ಸಂದಾಯಕ್ಕೆ ಅವಶ್ಯಕವಿರುವ ಮೊಬಲಗನ್ನು ನೀರು ಮತ್ತು ನೈರ್ಮಲ್ಯ ಸಂಚಿತ ನಿಧಿಗೆ ವರ್ಗಾಯಿಸಲಾಗುವುದು.

12. ಇದಲ್ಲದೆ, ಬಂಡವಾಳ ಹೂಡಿಕೆದಾರರ ಸಮಾಧಾನಕರ ಮಟ್ಟವನ್ನು ಹೆಚ್ಚಿಸಲು ಮತ್ತು ಸಾಲ ಪಡೆಯುವ ವೆಚ್ಚವನ್ನು ತಗ್ಗಿಸಲು ಈ ಕೆಳಕಂಡ ಸಾಲವರ್ಧನೆ ಕ್ರಮಗಳನ್ನು ಅಸ್ಥಿತ್ವಕ್ಕೆ ತರಲಾಗುವುದು.

i) **ಬಾಂಡ್ ಸೇವಾ ನಿಧಿ:** ನಗರ ಸ್ಥಳೀಯ ಸಂಸ್ಥೆಗಳ Poolಗೆ ರಾಜ್ಯ ಮಟ್ಟದಲ್ಲಿ ರೂ.25.5 ಕೋಟಿಯೊಂದಿಗೆ ಬಾಂಡ್ ಸೇವಾ ನಿಧಿಯನ್ನು ಸ್ಥಾಪಿಸಲಾಗುವುದು. ಬಾಂಡ್ ಸೇವಾ ನಿಧಿಯ ಆಡಳಿತವನ್ನು ಆಸ್ತಿ ನಿರ್ವಹಣಾ ಕಂಪನಿಯು ಎಂದರೆ, KUIDFC ಇವು ನೋಡಿಕೊಳ್ಳುತ್ತದೆ. ಕರ್ನಾಟಕ ಸರ್ಕಾರವು ಬಾಂಡ್ ಸೇವಾ ನಿಧಿಗೆ ಅಗತ್ಯವಿರುವ ಪ್ರಾರಂಭಿಕ ವಂತಿಗೆಯನ್ನು ಅದರ ಸ್ವಂತ ಸಂಪನ್ಮೂಲಗಳಿಂದ ಅಥವಾ ಸರ್ಕಾರ ಗುರುತಿಸಿದ ಮೂಲಗಳಿಂದ ಒದಗಿಸಲು KUIDFC ಅಧಿಕಾರ ನೀಡುತ್ತದೆ. KWSPF ಮತ್ತು ಕರ್ನಾಟಕ ಸರ್ಕಾರದ ಪರವಾಗಿ KUIDFCಯು, ಬಾಂಡ್ ಸೇವಾ ನಿಧಿಯ ಭಾಗಶ: ಹಣವನ್ನು ತುಂಬಿ ಕೊಡುವುದಕ್ಕಾಗಿ ಕೇಂದ್ರ ಸರ್ಕಾರದ ಸಂಚಿತ ಹಣಕಾಸು ಅಭಿವೃದ್ಧಿ ನಿಧಿಗೆ ಅರ್ಜಿ ಸಲ್ಲಿಸುವುದು.

ii) **ರಾಜ್ಯ ಮಧ್ಯಸ್ಥಿಕೆ:** ರಾಜ್ಯ ಮಧ್ಯಸ್ಥಿಕೆ ಭಾಗವಹಿಸುವ ನಗರ ಸ್ಥಳೀಯ ಸಂಸ್ಥೆಗಳಿಗೆ ರಾಜ್ಯ ವರ್ಗಾವಣೆ ಮಾಡುವ ನಿಧಿಗಳನ್ನು ತಡೆದು ಅವುಗಳನ್ನು ಯಾವುದೇ ಭಾಗವಹಿಸುವ ನಗರ ಸ್ಥಳೀಯ ಸಂಸ್ಥೆಯು ಸಾಲ ತೀರಿಸಲು ತಪ್ಪಿದ ಪಕ್ಷದಲ್ಲಿ ಮಾರುಕಟ್ಟೆ ಸಾಲ ತೀರಿಸಲು WSPFಗೆ ನೇರವಾಗಿ ವರ್ಗಾಯಿಸುವುದನ್ನು ಸೂಚಿಸಿರುವ ಕರ್ನಾಟಕ ಸರ್ಕಾರದ ಭದ್ರತಾ ಪತ್ರವನ್ನು ಇದು ಒಳಗೊಂಡಿರುತ್ತದೆ.

iii) **ಅಭಿವೃದ್ಧಿ ಸಾಲ ಪ್ರಾಧಿಕಾರ ಅಡಿಯಲ್ಲಿ US-AID ಖಾತರಿ:** ಅಭಿವೃದ್ಧಿ ಸಾಲ ಪ್ರಾಧಿಕಾರದ ಮೇರೆಗೆ US-AID ಯು ಅದರ ಅಭಿವೃದ್ಧಿ ಸಾಲ ಪ್ರಾಧಿಕಾರ ಕಾರ್ಯಕ್ರಮದಡಿಯಲ್ಲಿ (DCA) BSF ಸಾಲ ತೀರಿಸಲು ತಪ್ಪಿದ ಅಥವಾ ಸಾಲವನ್ನು ತೀರಿಸದಿದ್ದ ಪಕ್ಷದಲ್ಲಿ ಮಾರುಕಟ್ಟೆಯಿಂದ ಎತ್ತಿದ ಸಾಲದ ಅಸಲಿನ ಶೇ.50ರಷ್ಟಕ್ಕೆ ಖಾತರಿ ಒದಗಿಸುತ್ತದೆ. ಅಭಿವೃದ್ಧಿ ಸಾಲ ಪ್ರಾಧಿಕಾರದ ಖಾತರಿ ಶುಲ್ಕದಲ್ಲಿ ಖಾತರಿ ನೀಡಿರುವ ಮೊಬಗಲನ್ನು ಆಧರಿಸಿ ಒಂದು ಬಾರಿಯ ಪ್ರಾರಂಭಿಕ Upfront ಬದ್ಧತಾ ಶುಲ್ಕ 0.75 ಮತ್ತು ಬಾಕಿ ಇರುವ ಖಾತರಿ ವ್ಯಾಪ್ತಿಯ ಮೇಲೆ ವಾರ್ಷಿಕ ಬಳಕೆ ಶುಲ್ಕ ಶೇ.0.5 ರಷ್ಟು ಒಳಗೊಂಡಿರುತ್ತದೆ. DCA ಅಡಿಯಲ್ಲಿ ಪ್ರಸ್ತಾಪಿತ ಖಾತರಿಯು ನಗರ ಸ್ಥಳೀಯ ಸಂಸ್ಥೆಗಳಿಗೆ ಬೀಳುವ ಸಾಲ ಪಡೆಯುವ ವೆಚ್ಚವನ್ನು ತಗ್ಗಿಸುತ್ತದೆ ಎಂದು ನಿರೀಕ್ಷಿಸಲಾಗಿದೆ.

iv) ಉಳಿದ ಶೇ.50ರಷ್ಟನ್ನು ಅಸಲು ಮತ್ತು ಬಡ್ಡಿಯ ಘಟಕ ಅಂಶಕ್ಕೆ ಸಂಬಂಧಿಸಿದಂತೆ ಭಾರತೀಯ ಸಂಸ್ಥೆಯಿಂದ (ಗಳಿಂದ)ನೆರವಿನ ಖಾತರೇನಾದರೂ ದೊರೆಯುವುದೇ ಎಂಬುದನ್ನು ಕುರಿತು ನಗರಾಭಿವೃದ್ಧಿ ಇಲಾಖೆ/ KWSPF/KUIDFC ರವರಿಂದ ಅನ್ವೇಷಿಸಲಾಗುವುದು.

WSPF ಮತ್ತು ರಾಜ್ಯ ಸರ್ಕಾರ ಪರವಾಗಿ KUIDFCಯು ಪ್ರಸ್ತಾಪಿತ ಬಾಂಡ್ ಇಷ್ಯೂ (Bond issue) ಕುರಿತಂತೆ ತೆರಿಗೆ ವಿನಾಯ್ತಿಗಾಗಿ ನೀಡುವ ಬಗ್ಗೆ ಭಾರತ ಸರ್ಕಾರದೊಂದಿಗೆ ವ್ಯವಹರಿಸುತ್ತದೆ.

**V. ರಾಜ್ಯ ಸಂಪನ್ಮೂಲಗಳಿಂದ ಭರಿಸಬೇಕಾಗಿರುವ ನಗರ ಸ್ಥಳೀಯ ಋಣ ತೀರಿಕೆಯಲ್ಲಿನ ಅಂತರ:**

13. ನಗರ ಸ್ಥಳೀಯ ಸಂಸ್ಥೆಗಳ ಹೆಚ್ಚುವರಿ ಆದಾಯದ ಪೈಕಿ ಕನಿಷ್ಠ ಶೇ.40 ರಷ್ಟು ಆದಾಯವನ್ನು ನಗರ ಸ್ಥಳೀಯ ಸಂಸ್ಥೆಗಳ ಋಣ ತೀರಿಕೆಗೆ ಉಪಯೋಗಿಸಲಾಗುವುದೆಂಬ ಗ್ರಹಿಕೆಯಿಂದ ಹಣಕಾಸಿನ ನಿರ್ಧಾರಣೆಯನ್ನು ಮಾಡಲಾಗಿದೆ. ಆದರೆ, ಭಾಗವಹಿಸುವ ನಗರ ಸ್ಥಳೀಯ ಸಂಸ್ಥೆಗಳ ಕಡಿಮೆ ಮಟ್ಟದಲ್ಲಿರುವ ಆದಾಯದ ಹೆಚ್ಚುವರಿಯ ಪ್ರಸಕ್ತ ಸ್ಥಿತಿಯನ್ನು

ಗಮನಿಸಿದರೆ, ಮಾರುಕಟ್ಟೆ ಹಾಗೂ ಬೃಹನ್ನಗರ ಋಣ ತೀರಿಕೆಗಾಗಿ ಹೆಚ್ಚುವರಿ ಸಂಪನ್ಮೂಲಗಳು ಬೇಕಾಗುತ್ತವೆ. ಸಾಲ ಪತ್ರದ ಅವಧಿಯಲ್ಲಿ ಹಾಗೂ ಸಾಲದ ಅವಧಿಯಲ್ಲಿ ಕೇವಲ ಮಾರುಕಟ್ಟೆ ಸಾಲ ಹಾಗೂ ಬೃಹನ್ನಗರ ಸಾಲವು ಸೇರಿದಂತೆ ಒಟ್ಟು ಸಾಲಕ್ಕೆ ಅನುಕ್ರಮವಾಗಿ 66.5 ಕೋಟಿ ರೂಪಾಯಿಗಳು ಹಾಗೂ 96.05 ಕೋಟಿ ರೂಪಾಯಿಗಳಷ್ಟು(ಪ್ರಸಕ್ತ ಮೌಲ್ಯ) ಹೆಚ್ಚುವರಿ ಸಂಪನ್ಮೂಲಗಳು ಬೇಕಾಗುತ್ತವೆ. ಇದು ಮುಂದಿನ 15 ವರ್ಷಗಳ ಅವಧಿಗೆ ನೀಡಲಾಗುವ 13 ಕೋಟಿ ರೂಪಾಯಿಗಳ ವಾರ್ಷಿಕ ಹೆಚ್ಚುವರಿ ಅನುದಾನಕ್ಕೆ ಸಮನಾದಷ್ಟಾಗುತ್ತದೆ. ಈ ಹೆಚ್ಚುವರಿ ವಾರ್ಷಿಕ ಅನುದಾನಗಳನ್ನು ಮುಂದಿನ ಹದಿನೈದು ವರ್ಷಗಳ ಅವಧಿಯಲ್ಲಿ ಭಾಗವಹಿಸುವ ನಗರ ಗಳಿಗೆ ರಾಜ್ಯ ಸರ್ಕಾರ ಒದಗಿಸಬೇಕಾಗುತ್ತದೆ. ವಿವರಗಳನ್ನು ಅನುಬಂಧ-IIರಲ್ಲಿ ನೀಡಲಾಗಿದೆ.

14. ಯೋಜನೆಗೆ ಸಂಬಂಧಿಸಿದ ಹಣಕಾಸು ಸಾಮರ್ಥ್ಯ ಕುರಿತ ಅಧ್ಯಯನವು, ಎಸ್‌ಎಎಸ್ ಅನ್ನು ಜಾರಿಗೊಳಿಸಿದ್ದರ ಪರಿಣಾಮವಾಗಿ ನಗರ ಸ್ಥಳೀಯ ಸಂಸ್ಥೆಗಳ ಆಸ್ತಿ ತೆರಿಗೆ ಸ್ವೀಕೃತಿಗಳಲ್ಲಿ ಶೇ.35 ರಷ್ಟು ಒಂದು ಬಾರಿಯ ಹೆಚ್ಚಳವುಂಟಾಗುವುದೆಂದು ಊಹಿಸಲಾಗಿದೆ. ಆದರೆ, ತೆರಿಗೆ ಸಂಗ್ರಹ ಸಾಧನೆಯು ಈ ಊಹೆಯನ್ನು ಮೀರಿದರೆ ವಾರ್ಷಿಕ ಹೆಚ್ಚುವರಿ ಅನುದಾನಕ್ಕೆ ಸಂಬಂಧಿಸಿದ ಬೇಡಿಕೆ ಪ್ರಮಾಣ ಕಡಿಮೆಯಾಗುತ್ತದೆ. ಇದಲ್ಲದೆ, ರೂಢಿಗತವಾಗಿ ಅಂದಾಜು ಮಾಡಿರುವಂಥ ಬಳಕೆದಾರರ ವಂತಿಗೆಗಳಂಥ ಪ್ರಮುಖ ಮಾನದಂಡಗಳು ಬದಲಾಗ ಬಹುದು. ಆದ್ದರಿಂದ, ವಾರ್ಷಿಕ ಅನುದಾನದ ಅಗತ್ಯಗಳು ಕಡಿಮೆಯಾಗುತ್ತವೆ. ಇಷ್ಟಾದರೂ, ಮಾರುಕಟ್ಟೆಯನ್ನು ಪ್ರವೇಶಿಸುವುದಕ್ಕೆ ಮುಂಚಿತವಾಗಿ ಸಾಲವರ್ಧನೆ ವ್ಯವಸ್ಥೆಯನ್ನು ಜಾರಿಗೊಳಿಸಲು ಪ್ರಾರಂಭಿಕ ಬದ್ಧತೆ ಅತ್ಯವಶ್ಯಕ.

**VI. ಬಾಹ್ಯ ಏಜೆನ್ಸಿಗಳಿಗೆ ಸಾಲ ಮರುಪಾವತಿಗಳು:**

15. ಬಾಹ್ಯ ಸಾಲಗಳ ಮರುಪಾವತಿಗಾಗಿ 2006-2007ರಿಂದ 2012-2013ರ ಸಾಲಿನವರೆಗೆ ವಾರ್ಷಿಕ ಆಯವ್ಯಯದಲ್ಲಿ ರೂ.22.00 ಕೋಟಿಗಳು ನಗರಾಭಿವೃದ್ಧಿ ಇಲಾಖೆಗೆ ಬೇಕಾಗುತ್ತದೆ. 2013-2014ನೇ ಸಾಲಿನಲ್ಲಿ ಸಾಲಗಳ ಮರುಪಾವತಿ ಪ್ರಾರಂಭವಾಗುವ ಮೇರೆಗೆ ಆ ವರ್ಷದವರೆಗೆ ವಾರ್ಷಿಕ ಆಯವ್ಯಯದಲ್ಲಿ ಹಣ ಅವಕಾಶ ರೂ.33.00 ಕೋಟಿಗೆ ಹೆಚ್ಚಾಗುತ್ತದೆ. ಹಾಗೂ 2032-2033ನೇ ಸಾಲಿಗೆ ಕ್ರಮೇಣ ರೂ.12.7 ಕೋಟಿ ಕ್ಷೀಣಿಸುವುದು. ಒಂದುವೇಳೆ, ಪ್ರಸ್ತಾಪಿತ ಬಾಹ್ಯ ನೆರವಿನ ಯೋಜನೆಗಳಡಿಯಲ್ಲಿ ಮುಂದಿನ ಕೆಲವು ತಿಂಗಳಿನಲ್ಲಿ ಸಾಲ ದೊರೆಯದಿದ್ದಲ್ಲಿ, ನಗರಾಭಿವೃದ್ಧಿ ಇಲಾಖೆಯು Domestic ಹಣಕಾಸು ಸಂಸ್ಥೆಗಳಿಂದ ಇಲ್ಲವೇ ಮಾರುಕಟ್ಟೆಗಳಿಂದ ಸಾಲ ಪಡೆಯಲು ಅವಶ್ಯಕವಾಗಬಹುದಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ.ನಅಇ 27 ಎಂಎನ್‌ಐ 2000, ಬೆಂಗಳೂರು, ದಿನಾಂಕ.26ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರೂ.658.64 ಕೋಟಿಗಳ ಅಂದಾಜು ವೆಚ್ಚದಲ್ಲಿ ಬೆಂಗಳೂರು ಮಹಾನಗರ ಪ್ರದೇಶದ ವ್ಯಾಪ್ತಿಯಲ್ಲಿ ಬರುವಂತಹ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹಾದೇವಪುರ, ರಾಜರಾಜೇಶ್ವರಿನಗರ, ಯಲಹಂಕ ನಗರಸಭೆಗಳು ಮತ್ತು ಕೆಂಗೇರಿ ಪುರಸಭೆಗೆ ನೀರು ಪೂರೈಕೆ ಹಾಗೂ ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರವು ಅನುಮೋದನೆಯನ್ನು ನೀಡಿದೆ. ಯೋಜನಾ ವೆಚ್ಚ ಹಾಗೂ ಆರ್ಥಿಕ ವಿನ್ಯಾಸ, ಸಾಲಗಳ ಮರುಪಾವತಿ ರಾಜ್ಯ ಸರ್ಕಾರದಿಂದ ಮೂಲಗಳ ವರ್ಗಾವಣೆ ಹಾಗೂ ಹೆಚ್ಚುವರಿ ಚಾಲನಾ ಅನುದಾನಗಳ ಕುರಿತಾದ ವಿವರಗಳನ್ನು ಈ ಆದೇಶದೊಂದಿಗೆ ಕ್ರಮವಾಗಿ ಅನುಬಂಧ-1 ಹಾಗೂ 2ರಲ್ಲಿ ನೀಡಲಾಗಿದೆ. ಈ ಯೋಜನೆಯ ಅನುಷ್ಠಾನದ ಅವಧಿಯು 3 ವರ್ಷಗಳು ಅಂದರೆ, 2003-04, 2004-05 ಹಾಗೂ 2005-06 ಹಾಗೂ ಈ ಯೋಜನೆಯನ್ನು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ ಅನುಷ್ಠಾನಗೊಳಿಸಲ್ಪಡುವುದು. ಅವಶ್ಯಕ ಹಣಕಾಸಿನ ವ್ಯವಸ್ಥೆಯಾದ ನಂತರ ಒಳಚರಂಡಿ ಯೋಜನೆಯನ್ನು ಕೈಗೆತ್ತಿಗೊಳ್ಳಲಾಗುವುದು.

2. ಈ ಕೆಳಕಂಡ ಅಂಶಗಳಿಗೆ ಸರ್ಕಾರದ ಮಂಜೂರಾತಿಯನ್ನು ಸಹ ನೀಡಿದೆ:-

(ಎ) ಯೋಜನೆಯನ್ನು ಅನುಷ್ಠಾನಗೊಳಿಸುವ ಅವಧಿಯಲ್ಲಿ ತ್ರೈಮಾಸಿಕವಾಗಿ ಬಿಡುಗಡೆ ಮಾಡುವಂತಹ 74.28 ಕೋಟಿ ರೂಪಾಯಿಗಳ ರಾಜ್ಯ ಬಂಡವಾಳ ಅನುದಾನ ಬಿಡುಗಡೆಗೆ,

(ಬಿ) ಕರ್ನಾಟಕ ಸರ್ಕಾರದಿಂದ 10,000 ರೂಪಾಯಿಗಳ ಪ್ರಾರಂಭಿಕ ಕೊಡುಗೆಯನ್ನೊಳಗೊಂಡ ಜಲ ಮತ್ತು ನೈರ್ಮಲ್ಯ ಸಂಚಿತ ನಿಧಿ(WSPF) ಎಂಬ ಒಂದು ಟ್ರಸ್ಟ್ ಅನ್ನು ಮೇಲಿನ ಪ್ರಸ್ತಾವನೆಯಲ್ಲಿ ಸೂಚಿಸಿದ ಟ್ರಸ್ಟಿಗಳೊಂದಿಗೆ ಭಾರತ ನ್ಯಾಸ ಅಧಿನಿಯಮ 1982ರ ಅಡಿಯಲ್ಲಿ ಸ್ಥಾಪನೆಗೆ,

(ಸಿ) WSPF ಟ್ರಸ್ಟ್ ನಿರ್ವಹಣೆಗಾಗಿ ಸ್ವತ್ತು ನಿರ್ವಹಣಾ ಸಂಸ್ಥೆಯಾಗಿ KUIDFC ನೇಮಕಕ್ಕೆ,

(ಡಿ) ನಗರ ಸ್ಥಳೀಯ ಸಂಸ್ಥೆಗಳ ತ್ರೈಮಾಸಿಕ ಕಂತುಗಳಲ್ಲಿ ಸಾಲ ಮರುಪಾವತಿ ಮಾಡಬೇಕಾದ ಮೊತ್ತದಲ್ಲಿ ಉಂಟಾಗುವ ಕೊರತೆಯನ್ನು ಭರಿಸಲು, ಮುಂದಿನ 15 ವರ್ಷ ಅಥವಾ ಬಾಂಡುಗಳು ಮತ್ತು/ಅಥವಾ ಸಾಲಗಳು ಚಾಲ್ತಿಯಲ್ಲಿರುವವರೆಗೆ ವಾರ್ಷಿಕ ರೂ.13.00 ಕೋಟಿಗಳನ್ನು ಅಥವಾ ಯತಾರ್ಥವಾಗಿ ಬೇಕಾಗುವ ಮೊತ್ತವನ್ನು ಹೆಚ್ಚುವರಿ ಅನುದಾನವಾಗಿ ಸರ್ಕಾರದಿಂದ ವಾರ್ಷಿಕ ಆಯವ್ಯಯದಲ್ಲಿ ಒದಗಿಸಲು,

(ಇ) ಅಡಿಷನಲ್ ಸೆಂಟ್ರಲ್ ಸ್ಕೀಂ ಅಡಿ ರಾಜ್ಯದ ಅನುದಾನಕ್ಕಾಗಿ ವಾರ್ಷಿಕ ಆಯವ್ಯಯದಲ್ಲಿ ಅಗತ್ಯ ಅನುದಾನದ ಅವಕಾಶ ಕಲ್ಪಿಸುವುದಕ್ಕೆ ಮತ್ತು ಕೇಂದ್ರ ಸರ್ಕಾರದ ನೀತಿಯಂತೆ ಬಾಹ್ಯ ಸಾಲಗಳು ಮತ್ತು/ಅಥವಾ ಆಂತರಿಕ ಹಣಕಾಸು ಸಂಸ್ಥೆಗಳಿಂದ ಪಡೆಯುವ ಸಾಲಗಳ ಮರುಪಾವತಿಗಾಗಿ ರಾಜ್ಯ ವಾರ್ಷಿಕ ಆಯವ್ಯಯದಲ್ಲಿ ಅನುದಾನ ಒದಗಿಸಿಕೊಳ್ಳಲು,

(ಎಫ್) 25.5 ಕೋಟಿ (ಅಥವಾ ಕ್ರೆಡಿಟ್ ರೇಟಿಂಗ್ ಏಜೆನ್ಸಿ ನಿರ್ಧರಿಸಿದಂತಹ) ಮೊಬಲಗಿನ WSPFಯೊಳಗೆ ಬಾಂಡ್ ಸರ್ವೀಸ್ ನಿಧಿಯಾಗಿ ಸ್ಥಾಪನೆ ಮತ್ತು ಬಂಡವಾಳವಾಗಿ ಉಪಯೋಗಿಸುವುದಕ್ಕೆ ಪ್ರಾರಂಭಿಕ ಅಧಿಕಾಂಶ ಕೊಡುಗೆಯು KUIDFC ಯಿಂದ ಬರುತ್ತದೆ. KUIDFCಯು WSPF ಮತ್ತು ಕರ್ನಾಟಕ ಸರ್ಕಾರದ ಪರವಾಗಿ ಭಾರತ ಸರ್ಕಾರದ-PFDF ರವರಿಂದ ಅನುದಾನಗಳ ಮೂಲಕ ಈ ಕೊಡುಗೆಯನ್ನು ಭರಿಸಿಕೊಳ್ಳಲು ಪ್ರಯತ್ನಿಸುತ್ತದೆ,

(ಜಿ) ಭಾಗಿಯಾಗುವ ಯಾವುದೇ ನಗರ ಸ್ಥಳೀಯ ಸಂಸ್ಥೆಯು ಸಾಲವನ್ನು ತೀರಿಸಲು ತಪ್ಪಿದ ಸಂದರ್ಭದಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಕರ್ನಾಟಕ ಸರ್ಕಾರದಿಂದ ಪ್ರಾಪ್ತವಾಗುವಂತಹ ಹಣವನ್ನು ತಡೆದು ನಿಲ್ಲಿಸಿ ಅದನ್ನು ನೇರವಾಗಿ WSPFಗೆ ಮಾರುಕಟ್ಟೆ ಸಾಲಗಳನ್ನು ತೀರಿಸುವುದಕ್ಕಾಗಿ ವರ್ಗಾಯಿಸಲಾಗುವುದೆಂದು ತಿಳಿಸುವ ಕರ್ನಾಟಕ ಸರ್ಕಾರದ ವಚನ ಬದ್ಧತಾ ಪತ್ರ ನೀಡುವುದಕ್ಕೆ,

(ಹೆಚ್) ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಯೋಜನಾ ಚಾಲನಾ ಸಮಿತಿ ರಚನೆಗೆ,

(ಐ) ನಗರಾಭಿವೃದ್ಧಿ ಇಲಾಖೆ, ಪೌರಾಡಳಿತ ಇಲಾಖೆ, ಯೋಜನಾ ಚಾಲನಾ ಸಮಿತಿ, ಬೆಂಗಳೂರು ಜಲಮಂಡಳಿ, KUIDFC ಮತ್ತು WSPF ಸಂಸ್ಥೆಗಳಿಗೆ ಕೆಳಕಂಡಂತೆ ಕ್ರಮ ಜರುಗಿಸಲು ಅನುಮತಿ ನೀಡುವುದಕ್ಕೆ,

i) ಯೋಜನೆಯ ವಿನ್ಯಾಸ, ಅನುಕ್ರಮ ಮತ್ತು ಟೆಂಡರ್‌ಗಳನ್ನು ಹಾಗೂ ಹಣಕಾಸಿನ ಯೋಜನೆಯನ್ನು ಅಂತಿಮ ಗೊಳಿಸಲು ಮತ್ತು ಯುಕ್ತವಾದಂತೆ ಹಣಕಾಸು ಸಂಸ್ಥೆ ಗಳೊಂದಿಗೆ ಮಾತುಕತೆ ನಡೆಸಲು,

ii) ಅವಶ್ಯಕತೆಗೆತಕ್ಕಂತೆ, US-AID ಮತ್ತು ಇತರ ಹಣಕಾಸು ಸಂಸ್ಥೆಗಳೊಂದಿಗೆ ಸಾಲ ಹೆಚ್ಚಿಸುವ ವ್ಯವಸ್ಥೆಗಾಗಿ ಮಾತುಕತೆ ನಡೆಸಲು ಮತ್ತು ಸೂಕ್ತ ಖಾತರಿ ಒಪ್ಪಂದಗಳಿಗೆ ಸಹಿ ಹಾಕಲು,

iii) ಕೇಂದ್ರ ಸರ್ಕಾರಕ್ಕೆ ಅರ್ಜಿಗಳನ್ನು ಸಲ್ಲಿಸುವುದು ಸೇರಿದಂತೆ ಯೋಜನೆಗೆ ಹಣ ಒದಗಿಸಲು ಅಗತ್ಯವಾದ ಇತರ ದಸ್ತಾವೇಜುಗಳನ್ನು ಬರೆದು ಕೊಡಲು,

iv) ಸೂಕ್ತ ಒಡಂಬಡಿಕೆ ಮತ್ತು ಸುಧಾರಣೆ ಉಪಾಯಗಳೊಂದಿಗೆ ನಗರ ಸ್ಥಳೀಯ ಸಂಸ್ಥೆಗಳೊಡನೆ ಉಪಸಾಲ ಕರಾರು ಮಾಡಿಕೊಳ್ಳಲು,

v) ಯೋಜನೆಯನ್ನು ಕಾರ್ಯಗತಗೊಳಿಸಲು ಮತ್ತು ಅದಕ್ಕೆ ಹಣ ಒದಗಿಸಲು ಅಗತ್ಯವಾದ ಯಾವುದೇ ಇತರ ಕ್ರಮ ಕೈಗೊಳ್ಳುವುದು, ಮತ್ತು

vi) ಖಾತರಿ ಫೀ (ಒಂದು ಬಾರಿ ಕಮಿಟ್‌ಮೆಂಟ್ ಮತ್ತು ಖಾತರಿ ಉಪಯೋಗ ಶುಲ್ಕ)ಪಾವತಿ ಸೇರಿದಂತೆ ಯೋಜನೆಗೆ ತಗಲುವ ವೆಚ್ಚವನ್ನು ಮಾಡಲು,

(ಜೆ) ಯೋಜನಾ ಚಾಲನಾ ಸಮಿತಿ ನಿರ್ದೇಶನದ ಮೇರೆಗೆ ಅಗತ್ಯವಾದ ಯೋಜನೆಗಾಗಿ ಟೆಂಡರ್‌ಗಳನ್ನು ಹೊರಡಿಸಲು ಯೋಜನಾ ನಿರ್ವಹಣಾ ಸಲಹೆಗಾರರನ್ನು ನೇಮಿಸಲು ಯೋಜನಾ ನಿರ್ವಹಣಾ ಘಟಕಗಳನ್ನು ಸ್ಥಾಪಿಸಲು ಮತ್ತು ಆ 8 ಯೋಜನಾ ನಗರಗಳಲ್ಲಿನ ಕಾರ್ಯಾಚರಣೆ ಮತ್ತು ನಿರ್ವಹಣಾ ಅಗತ್ಯಗಳಿಗೆ ಬಾಹ್ಯ ಮೂಲ ಸೇವೆ ಒದಗಿಸುವುದಕ್ಕೆ ಹಾಗು ಈ ಸಂಬಂಧದಲ್ಲಿ ತಗಲುವ ವೆಚ್ಚವನ್ನು ಮಾಡಲು ಬೆಂಗಳೂರು ಜಲಮಂಡಳಿಗೆ ಅನುಮತಿ ನೀಡಲಾಗಿದೆ. ಯೋಜನೆಯ ಒಳಚರಂಡಿ ಘಟಕಕ್ಕೆ ಸಂಬಂಧಿಸಿದಂತೆ ಟೆಂಡರುಗಳನ್ನು ಹಣಕಾಸು ವ್ಯವಸ್ಥೆ ಆದನಂತರವೇ ಪ್ರಕಟಿಸತಕ್ಕದ್ದು,

(ಕೆ) ನಗರ ಸ್ಥಳೀಯ ಸಂಸ್ಥೆಗಳಿಗೆ ಈ ಯೋಜನೆಗೆ ಸಂಬಂಧಿಸಿದಂತೆ ತಮ್ಮ ಆದಾಯವನ್ನು, ಆಡಳಿತ ನಿರ್ವಹಣ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಮತ್ತು ಈ ನಗರಗಳ ಮೂಲಭೂತ ಸೌಲಭ್ಯಗಳನ್ನು ಸುಧಾರಿಸಲು ಸಾಲವನ್ನು ತೆಗೆದುಕೊಳ್ಳಲು ಮತ್ತು ವ್ಯಾಪಕ ಸುಧಾರಣೆಗಳನ್ನು ಕೈಗೊಳ್ಳಲು ಅವುಗಳಿಗೆ ಅನುಮತಿಯನ್ನು ನೀಡಲು,

(ಎಲ್) ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಬಂಧದಲ್ಲಿ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಲ್ಲಿ ಎರಡು ಅಧೀಕ್ಷಕ ಇಂಜಿನಿಯರ್ (Superintending Engineer) ಹುದ್ದೆಗಳನ್ನು ಮತ್ತು ಅಗತ್ಯ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಲು ಮಂಜೂರಾತಿಯನ್ನು ನೀಡಿದೆ. ಈ ಹುದ್ದೆಗಳ ಸೃಜನಾ ಅವಧಿಯು ಯೋಜನೆಯು ಮುಕ್ತಾಯಗೊಳ್ಳುವುದರೊಂದಿಗೆ ಮುಕ್ತಾಯಗೊಳ್ಳುತ್ತದೆ. ಈ ಬಾಬ್ತಿಗೆ ತಗಲುವ ವೆಚ್ಚವನ್ನು ಯೋಜನಾ ವೆಚ್ಚದ ಮಿತಿಯೊಳಗೆ ಭರಿಸತಕ್ಕದ್ದು,

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ.313.ವೆಚ್ಚ-9/03 ದಿನಾಂಕ. 21-8-2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಸತ್ಯನಾರಾಯಣರಾವ್**

ಸರ್ಕಾರದ ಉಪಕಾರ್ಯದರ್ಶಿ-1 ನಗರಾಭಿವೃದ್ಧಿ ಇಲಾಖೆ.

## ಅನುಬಂಧ-1

### (ಸರ್ಕಾರದ ಆದೇಶ ಸಂಖ್ಯೆ: ನಅಇ 27 ಎಂಎನ್ಐ 2000, ದಿನಾಂಕ: 26.12.2003)

### ಯೋಜನಾ ವೆಚ್ಚಗಳು ಮತ್ತು ಹಣಕಾಸು ಯೋಜನೆಗಳು (ಕೋಟಿ ರೂ.ಗಳಲ್ಲಿ)

| | | ಒಟ್ಟು ವೆಚ್ಚಗಳು | | | | | ಆರ್ಥಿಕ ಯೋಜನೆ | | | | |
|---|---|---|---|---|---|---|---|---|---|---|---|
| | | ನೀರು | ಒಳಚರಂಡಿ | ಒಟ್ಟು | ಬಳಕೆದಾರರ ವಂತಿಗೆ | ನೀರು ಯೋಜನೆಗೆ ಅನುದಾನ | ನಗರ ಸ್ಥಳೀಯ ಸಂಸ್ಥೆಗಳಿಗೆ ಮಾರುಕಟ್ಟೆ ಸಾಲ | ನಗರ ಸ್ಥಳೀಯ ಸಂಸ್ಥೆಗಳಿಗೆ ಬೃಹನ್‌ನಗರ ಸಾಲಗಳು | ಎ.ಸಿ.ಎಸ್. ಅಡಿ ಅನುದಾನ | ಒಳಚರಂಡಿ ಯೋಜನೆಗೆ ಬಾಹ್ಯ ಏಜೆನ್ಸಿಗಳಿಂದ ಸಾಲ | ಒಟ್ಟು |
| 1. | ಯಲಹಂಕ | 20.12 | 11.49 | 31.61 | 8.33 | 4.47 | 4.96 | 2.36 | 3.2 | 8.3 | 31.61 |
| 2. | ಬ್ಯಾಟರಾಯನಪುರ | 33.94 | 56.22 | 90.16 | 19.94 | 7.69 | 4.74 | 1.58 | 15.7 | 40.5 | 90.16 |
| 3. | ಕೃಷ್ಣರಾಜಪುರಂ | 55.98 | 30.83 | 86.81 | 15.15 | 12.24 | 19.39 | 9.21 | 8.6 | 22.2 | 86.81 |
| 4. | ಮಹದೇವಪುರ | 79.67 | 73.37 | 153.05 | 18.91 | 17.35 | 29.44 | 13.98 | 20.6 | 52.8 | 153.05 |
| 5. | ಬೊಮ್ಮನಹಳ್ಳಿ | 47.99 | 41.39 | 89.38 | 16.83 | 10.59 | 13.95 | 6.62 | 11.6 | 29.8 | 89.38 |
| 6. | ರಾಜರಾಜೇಶ್ವರಿ ನಗರ | 22.87 | 44.15 | 67.02 | 7.07 | 5.02 | 7.30 | 3.47 | 12.4 | 31.8 | 67.02 |
| 7. | ಕೆಂಗೇರಿ | 9.03 | 5.49 | 14.52 | 7.77 | 1.27 | 0.00 | 0.00 | 1.5 | 4.0 | 14.53 |
| 8. | ದಾಸರ ಹಳ್ಳಿ | 70.95 | 55.15 | 126.10 | 25.43 | 15.67 | 20.24 | 9.61 | 15.4 | 39.7 | 126.10 |
| | **ಒಟ್ಟು** | **340.55** | **318.10** | **658.65** | **119.44** | **74.28** | **100.00** | **46.82** | **89.10** | **229.01** | **658.66** |

4. ಪರಿಷ್ಕೃತಗೊಂಡ WAPCOನ ಮೂಲ ವೆಚ್ಚಗಳು, 2003-04ರ ಯೋಜನಾ ನಿರ್ಮಾಣದಲ್ಲಿ ಶೇ:6 ರಷ್ಟು ವೆಚ್ಚದೊಂದಿಗೆ ಪ್ರಾರಂಭಿಕ ಬೆಲೆ, ನಿರ್ಮಾಣ ಅವಧಿಯ ವೆಚ್ಚದಲ್ಲಿ ಶೇ.6 ರಷ್ಟು ಹೆಚ್ಚಳ, ಶೇ.5 ರಷ್ಟು ಭೌತಿಕ ಸಾದಿಲ್ವಾರು, ಶೇ.7 ರಷ್ಟು ಮೇಲ್ವಿಚಾರಣೆ ವೆಚ್ಚಗಳು, ಶೇ.2 ರಷ್ಟು ಗುತ್ತಿಗೆ ಕಾಮಗಾರಿ ತೆರಿಗೆ, ನಿರ್ಮಾಣ ಹಂತದಲ್ಲಿ ಶೇ.8 ರಷ್ಟು ಬಡ್ಡಿ, ಶೇ.2 ರಷ್ಟು ಆರ್ಥಿಕ ಮತ್ತು ಕಾನೂನು ಶುಲ್ಕ ಇವುಗಳು ಒಟ್ಟು ವೆಚ್ಚದಲ್ಲಿ ಸೇರಿರುತ್ತವೆ.

5. ಒಟ್ಟು ವೆಚ್ಚವು ಯೋಜನೆಗೆ 2003-04 ರಲ್ಲಿ ಪ್ರಾರಂಭಗೊಂಡು 30 ತಿಂಗಳ ಅವಧಿಯಲ್ಲಿ ಪೂರ್ಣಗೊಳ್ಳುತ್ತದೆ ಎಂಬ ಕಲ್ಪನೆಯೊಂದಿಗೆ ಒಟ್ಟು ವೆಚ್ಚವನ್ನು ಅಂದಾಜು ಮಾಡಲಾಗಿದೆ. ಆದಾಗ್ಯೂ ನಿರ್ಮಾಣ ವೆಚ್ಚದಲ್ಲಿ ಯೋಜನಾ ಒಟ್ಟು ವೆಚ್ಚವು ಮತ್ತು ಆರ್ಥಿಕ ಯೋಜನೆಯನ್ನು ಪರಿಷ್ಕರಣೆ ಮಾಡಬೇಕಾದ ಅಗತ್ಯ ಉಂಟಾಗಬಹುದು. ಯೋಜನಾ ನಿರ್ಮಾಣ 2004-05 ರಲ್ಲಿ ಆಗುವ ನಿರೀಕ್ಷೆಯಿದೆ.

6. ಯೋಜನಾ ನಿರ್ಮಾಣ ಅವಧಿಯಲ್ಲಿ ಅಗತ್ಯವಾಗಿ ಯೋಜನಾ ವೆಚ್ಚಗಳನ್ನು ಮತ್ತು ಆರ್ಥಿಕ ಯೋಜನೆಯನ್ನು ಲೆಕ್ಕ ಹಾಕಲು ಯೋಜನಾ ಚಾಲನಾ ಸಮಿತಿಗೆ ಅಧಿಕಾರವನ್ನು ಕೊಡಲಾಗಿದೆ.

## ಅನುಬಂಧ-2

### (ಸರ್ಕಾರದ ಆದೇಶ ಸಂಖ್ಯೆ: ನಅಇ 27 ಎಂಎನ್ಐ 2000, ದಿನಾಂಕ: 26.12.2003)

### ಸಾಲ ಮರುಪಾವತಿ ಅಗತ್ಯತೆಗಳು, ನಗರ ಸ್ಥಳೀಯ ಸಂಸ್ಥೆಗಳ ಸಂಪನ್ಮೂಲ ವರ್ಗಾವಣೆ, ಮತ್ತು ಕರ್ನಾಟಕ ಸರ್ಕಾರದಿಂದ ಹೆಚ್ಚುವರಿ ನಿರ್ಮಾಣ ಅನುದಾನದ ವಿವರಗಳು (ಕೋಟಿ ರೂಪಾಯಿಗಳಲ್ಲಿ)

| | | ಒಟ್ಟು | 2003-04 | 2004-05 | 2005-06 | 2006-07 | 2007-08 | 2008-09 | 2009-10 | 2010-11 | 2011-12 | 2012-13 | 2013-14 | 2014-15 | 2015-16 | 2016-17 |
|---|---|---|---|---|---|---|---|---|---|---|---|---|---|---|---|---|
| ಎ. ನಗರ ಸ್ಥಳೀಯ ಸಂಸ್ಥೆಗಳು ಪಡೆಯುವ ಸಾಲಗಳನ್ನು ಮರು ಪಾವತಿಸಬೇಕಾದ ಮೊತ್ತ (ಮಾರುಕಟ್ಟೆ ಸಾಲಗಳು ಮತ್ತು ಕೆಯುಐಡಿಎಫ್‌ಸಿ ಸಾಲಗಳು) | | | | | | | | | | | | | | | | |
| 1. | ಯಲಹಂಕ | 12.93 | 0.15 | 0.45 | 0.65 | 1.29 | 1.23 | 1.17 | 1.12 | 1.06 | 1.00 | 0.94 | 0.89 | 0.83 | 0.77 | 0.72 |
| 2. | ಬ್ಯಾಟರಾಯನಪುರ | 11.60 | 0.22 | 0.50 | 0.60 | 1.14 | 1.09 | 1.04 | 0.99 | 0.94 | 0.88 | 0.83 | 0.78 | 0.73 | 0.67 | 0.62 |
| 3. | ಕೃಷ್ಣರಾಜಪುರಂ | 50.26 | 0.47 | 1.63 | 2.52 | 5.03 | 4.81 | 4.58 | 4.36 | 4.14 | 3.91 | 3.69 | 3.47 | 3.24 | 3.02 | 2.80 |
| 4. | ಮಹದೇವಪುರ | 76.25 | 0.69 | 2.45 | 3.82 | 7.64 | 7.30 | 6.96 | 6.62 | 6.28 | 5.94 | 5.60 | 5.26 | 4.93 | 4.59 | 4.25 |
| 5. | ಬೊಮ್ಮನಹಳ್ಳಿ | 36.25 | 0.38 | 1.22 | 1.82 | 3.62 | 3.46 | 3.30 | 3.14 | 2.98 | 2.82 | 2.65 | 2.49 | 2.33 | 2.17 | 2.01 |

